# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್‌ಎನ್‌ಎಸ್ – 19

4ನೇ ವರ್ಷ 33ನೇ ಸಂಚಿಕೆ ಕೊಪ್ಪ 20-4-1986 ಭಾನುವಾರ ಬೆಲೆ 40 ಪೈಸೆ


### ಶಿವಮೊಗ್ಗ ವ್ಯ.ಮಾ.ಸ.: 1986-87ಕ್ಕೆ

## 31.68 ಲಕ್ಷ ರೂ. ಉಳಿತಾಯ ಬಜೆಟ್

ಶಿವಮೊಗ್ಗ: ಇಲ್ಲಿನ ವ್ಯವಸಾಯೋತ್ಪನ್ನ ಮಾರುಕಟ್ಟೆ ಸಮಿತಿಯು ತನ್ನ 1986-87ನೇ ಸಾಲಿಗೆ 31.68 ಲಕ್ಷ ರೂಪಾಯಿಗಳ ಉಳಿತಾಯ ಬಜೆಟ್ಟನ್ನು ಪಿ. 7ರಂದು ನಡೆದ ಸಭೆಯಲ್ಲಿ ಅಂಗೀಕರಿಸಿದೆ.

ಈ ಸಾಲಿನಲ್ಲಿ ಕಾರ್ಯನಿರತ ಬಂಡವಾಳ ವೆಚ್ಚಕ್ಕಾಗಿ 66.55 ಲಕ್ಷ ರೂಪಾಯಿಗಳನ್ನು ತೆಗೆದಿರಿಸಲಾಗಿದ್ದು, ಇದರಲ್ಲಿ ಅಭಿವೃದ್ಧಿ ಕೆಲಸಗಳಾದ ರಸ್ತೆಗಳ ಅಭಿವೃದ್ಧಿ, ಗ್ರಾಮಾಂತರ ಮಾರುಕಟ್ಟೆಗಳ ಅಭಿವೃದ್ಧಿ, ಕಂಪ್ಯೂಟರ್ ಯಂತ್ರ ಸ್ಥಾಪನೆ, ಭತ್ತ ಒಣಗಿಸುವ ಯಂತ್ರಗಳ ಸ್ಥಾಪನೆ, ನೌಕರರ ವಸತಿ ಗೃಹಗಳ ನಿರ್ಮಾಣ ಮುಂತಾದ ಮುಖ್ಯ ಬಾಬುಗಳು ಸೇರಿವೆ.

ಇದಕ್ಕೂ ಮಿಗಿಲಾಗಿ ಈ ಭಾಗದ ರೈತರ ಸರಕು ಸಾಗಾಣಿಕೆ ಅವಶ್ಯಕತೆಯನ್ನು ಪರಿಗಣಿಸಿ, ಸಮಿತಿಯು ವೆಚ್ಚದಿಂದ ಲಾರಿಯನ್ನು ಖರೀದಿಸಿ 'ಲಾಭ-ನಷ್ಟವಿಲ್ಲದ' ನಿರ್ವಹಣೆಯಂತೆ ಸೌಲಭ್ಯಗಳನ್ನು ಒದಗಿಸಿಕೊಡಲು ಕೂಡ ಉದ್ದೇಶಿಸಲಾಗಿದೆಯೆಂದು ಸಮಿತಿಯ ಅಧ್ಯಕ್ಷ ಕೆ. ಎನ್. ವೀರಪ್ಪಗೌಡರು ತಿಳಿಸಿದ್ದಾರೆ.

ಮೇಲ್ಕಂಡ ಎಲ್ಲ ಖರ್ಚುಗಳ ನಂತರ ಸಮಿತಿಯ ಖಾಯಂ ನಿಧಿಯಲ್ಲಿ ಉಳಿಯುವ ಬಾಕಿ 87.88 ಲಕ್ಷ ರೂಪಾಯಿಗಳಾಗಬಹುದೆಂದು ನಿರೀಕ್ಷಿಸಲಾಗಿದೆ.

### ಶಿವಮೊಗ್ಗ ಅಡಿಕೆ ಪೇಟೆ

ತಾರೀಕು: 17.4.86

| | |
|---|---|
| ಸರಕು | 2971–3085 |
| ಬೆಟ್ಟೆ | 1741–2100 |
| ಗೊರಬಲು | 1001–1601 |
| ಕಾಳು ಮೆಣಸು | 3800. (1.4.1986) |

### ಸಾಗರ ಅಡಿಕೆ ಪೇಟೆ

ತಾ॥ 17-4-1986

| | |
|---|---|
| ಸಿಪ್ಪೆ ಗೋಟು | ರೂ. 716ರಿಂದ 946 |
| ಕೆಂಪುಗೋಟು | ರೂ. 1296ರಿಂದ 1622 |
| ಬಿಳಿ ಗೋಟು | ರೂ. 996ರಿಂದ 1161 |
| ಆಪಿ | ರೂ. 3001ರಿಂದ 3316 |



## ಸಬ್‌ಇನ್‌ಸ್ಪೆಕ್ಟರ್ ದುರ್ಗಯ್ಯನವರನ್ನು ಕೊಪ್ಪದಲ್ಲೇ ಪುನಃ ನೇಮಿಸಲು ಒತ್ತಾಯ

ಕೊಪ್ಪ: ಇಲ್ಲಿನ ಪೋಲೀಸ್ ಸಬ್ ಇನ್‌ಸ್ಪೆಕ್ಟರ್ ದುರ್ಗಯ್ಯ ಅವರನ್ನು ಇಲ್ಲಿಯೇ ಪುನಃ ನೇಮಿಸಬೇಕೆಂದು ಸುಮಾರು ಇನ್ನೂರಕ್ಕೂ ಹೆಚ್ಚು ಜನ ಗೋವಿಂದಗೌಡರ ಮೂಲಕ ಸರ್ಕಾರವನ್ನು ಒತ್ತಾಯಪಡಿಸಿದ್ದಾರೆಂದು ತಿಳಿದುಬಂದಿದೆ.

ಕಳೆದ ವಾರ ಗೌಡರು ಇಲ್ಲಿ ಮೊಕ್ಕಾಂ ಮಾಡಿದ್ದಾಗ ಹೀಗೆ ಭೇಟಿ ಮಾಡಿದವರಲ್ಲಿ ಬಹುತೇಕ ಮಂದಿ ಜನತಾದ ಕಾರ್ಯಕರ್ತರು ಮತ್ತು ಬೆಂಬಲಿಗರೇ ಆಗಿದ್ದರೂ ಅದರೂ ಸುಮಾರು 30-40 ಜನ ಕಾಂಗ್ರೆಸ್ಸಿನವರು ಸಹ ಇದ್ದರೆಂದು ಹೇಳಲಾಗಿದೆ. ಜೊತೆಗೆ ಹಲವು ಮಂದಿ ನಾಗರಿಕರೂ ಈ ಒತ್ತಾಯದಲ್ಲಿ ತಮ್ಮ ದನಿ ಸೇರಿಸಿದ್ದರೆನ್ನಲಾಗಿದೆ.

"ಈ ಸಬ್‌ಇನ್‌ಸ್ಪೆಕ್ಟರ್ ಬಂದ ಮೇಲೆ ಊರಲ್ಲಿ ಗಲಾಟೆ, ಪುಂಡಾಟಿಕೆ ಇತ್ಯಾದಿ ಕಮ್ಮಿಯಾಗಿತ್ತು. ಮಾನವಂತ ಮಹಿಳೆಯರು, ಹೆಣ್ಣುಮಕ್ಕಳು ಧೈರ್ಯವಾಗಿ ಓಡಾಡಲು ಸಾಧ್ಯವಾಗಿತ್ತು. ಇಂಥ ಶಾಂತ ಪರಿಸ್ಥಿತಿ ಇನ್ನೂ ಮುಂದುವರಿಯಲು ಸಾಧ್ಯವಾಗುವಂತೆ ದುರ್ಗಯ್ಯನವರನ್ನೇ ಇಲ್ಲಿಗೆ ಪುನಃ ನೇಮಿಸಬೇಕು" ಎಂಬುದು ಇವರುಗಳ ಒತ್ತಾಯವಾಗಿತ್ತೆನ್ನಲಾಗಿದೆ.

ಈ ಬಗ್ಗೆ ಇನ್ನೂ ಅಂತಿಮ ತೀರ್ಮಾನವಾದ ವರದಿಗಳಿಲ್ಲ.

ಇಲಾಖೆಯನ್ನು ಬಲ್ಲ ಮೂಲಗಳ ಪ್ರಕಾರ, ಇಂಥ ಸನ್ನಿವೇಶಗಳಲ್ಲಿ ಸಂಬಂಧಪಟ್ಟ ಅಧಿಕಾರಿಗಳನ್ನು ವರ್ಗಾವಣೆ ಮಾಡಲಾಗುತ್ತದೆ. ಈ ಪ್ರಕರಣದಲ್ಲಿ ಗೃಹ ಮಂತ್ರಿ ರಾಚಯ್ಯನವರು ಮಾತ್ರ ಇಂಥ (ಇಲ್ಲೇ ಉಳಿಸುವಂಥ) ತೀರ್ಮಾನ ಕೈಗೊಳ್ಳಬಹುದು ಹೊರತು ಬೇರೆ ವರಿಷ್ಠ ಅಧಿಕಾರಿಗಳ್ಯಾರೂ ಇಂಥ ವಿಶಿಷ್ಟ ತೀರ್ಮಾನಗಳನ್ನು ಸಾಮಾನ್ಯವಾಗಿ ತೆಗೆದುಕೊಳ್ಳುವುದಿಲ್ಲ.

ರಾಚಯ್ಯನವರು ಇಂಥ ತೀರ್ಮಾನ ತೆಗೆದುಕೊಳ್ಳುವರೆ? ಗೋವಿಂದ ಗೌಡರ ವರ್ಚಸ್ಸು ಇಂಥ ವಿಶಿಷ್ಟ ಕೆಲಸ ಮಾಡಿಸಬಲ್ಲುದೆ?– ಕಾದು ನೋಡಬೇಕು.

ಈ ಮಧ್ಯೆ ಸರ್ಕಲ್ ಇನ್‌ಸ್ಪೆಕ್ಟರ್ ಮತ್ತು ಸಬ್ ಇನ್‌ಸ್ಪೆಕ್ಟರ್ ನಡುವಿನ ಹೊಡೆದಾಟದ ಬಗ್ಗೆ ಡಿವೈ ಎಸ್ಪಿಯವರು ನಡೆಸಿದ್ದ ತನಿಖೆಯ ಅಂತಿಮ ಫಲಿತಾಂಶ ಏನಾಗಿದೆ ಎಂಬ ಬಗ್ಗೆ ಯಾವುದೇ ವಿವರ ಸಿಕ್ಕಿಲ್ಲ.

## 'ಮಧುರ ಮಿಲನ' ಪ್ರಕಟಣೆ

ಗುಡ್ಡೇತೋಟ: ಇಲ್ಲಿನ ವಿನಾಯಕ ಪ್ರಕಾಶನದ ಎಂ. ವಿ. ಗಂಗಾಧರ್ ಸಂಪಾದಿಸಿರುವ 'ಮಧುರ ಮಿಲನ' ಕಥಾಸಂಕಲನ ಪ್ರಕಟವಾಗಿದೆ. ಪುಸ್ತಕದ ಬೆಲೆ 5 ರೂ. ಇದ್ದು, ಸಾಹಿತ್ಯಾಭಿಮಾನಿಗಳು ಪ್ರತಿಗಳನ್ನು ಕೊಂಡು ಪ್ರೋತ್ಸಾಹಿಸಬೇಕೆಂದು ಗಂಗಾಧರ್ ಕೋರಿದ್ದಾರೆ.

## ಹಲ್ಲೆ ಆರೋಪ: ಪ್ರಭಾವಿ ಸೋದರರ ಸೆರೆ

ಬಂಡಿಗಡಿ: ಇಲ್ಲಿಗೆ ಸಮೀಪದ ಸಂಕಯ್ಯನ ಕೊಡಿಗೆ ಎಂಬಲ್ಲಿ ಲಿಂಗಪ್ಪಗೌಡರ ಪತ್ನಿ ನಾಗವೇಣಿ ಎಂಬವರು ಕಾಡಿನಲ್ಲಿ ಒಣ ಸೌದೆ ಹೆರಕುತ್ತಿದ್ದಾಗ ಮಹಮದ್ ಹನೀಫ್, ಮಹಮದ್ ಯೂನುಸ್ ಎಂಬ ಸಹೋದರರು ಆಕೆಯ ಮೇಲೆ ಹಲ್ಲೆ ನಡೆಸಿ, ಅವರ ಮನೆಯವರನ್ನೆಲ್ಲ ಬಂದೂಕಿನಿಂದ ಸುಟ್ಟು ಧ್ವಂಸ ಮಾಡುವ ಬೆದರಿಕೆ ಹಾಕಿರುವುದಾಗಿ ಹರಿಹರಪುರ ಠಾಣೆಗೆ ದೂರು ನೀಡಲಾಗಿದ್ದು ಠಾಣಾಧಿಕಾರಿ ದುಗ್ಗಪ್ಪ ಅವರು ಇಬ್ಬರನ್ನೂ ಬಂಧಿಸಿ ಜಾಮೀನಿನ ಮೇಲೆ ಬಿಡುಗಡೆ ಮಾಡಿದ್ದಾರೆ.

ಸದರಿ ಕಾಡು ಸರ್ಕಾರದ್ದೆಂಬುದು ಗ್ರಾಮಸ್ಥರ ವಾದವಾಗಿದ್ದು ಅದು ತಮಗೆ ಸೇರಿದ್ದೆಂದು ಹೇಳಿ ಅದರಲ್ಲಿ ಸೌದೆ ವಗೈರೆ ತೆಗೆದುಕೊಂಡು ಹೋಗುವುದನ್ನು ಈ ಸೋದರರು ವಿರೋಧಿಸುತ್ತಿದ್ದಾರೆಂದು ಹೇಳಲಾಗಿದೆ. ಹನೀಫ್ ರಿವಾಲ್ವರಿನಂಥದೊಂದು ವಸ್ತುವನ್ನು ರಿವಾಲ್ವರ್ ಕವಚದಲ್ಲಿಟ್ಟು ಸೊಂಟಕ್ಕೆ ಕಟ್ಟಿಕೊಂಡು ಅಥವಾ 'ಏರ್‌ಗನ್' ಹಿಡಿದುಕೊಂಡು ಓಡಾಡುತ್ತ ಜನರಿಗೆ ಭೀತಿ ಹುಟ್ಟಿಸುತ್ತಿದ್ದಾನೆನ್ನಲಾಗಿದೆ. (ರಿವಾಲ್ವರ್ ಎಂದೇ ಜನರ ನಂಬಿಕೆ.) ಸದರಿ ಕಾಡಿನಾಚೆಯಿರುವ ಅವರ ಜಮೀನಿನಿಂದ ಜನ ಕಳವು ಮಾಡುವುದನ್ನು ತಪ್ಪಿಸಲು ಹೀಗೆ ಮಾಡುತ್ತಿರಬಹುದೆನ್ನಲಾಗಿದೆ.

ಬಂಧಿಸಲು ಹೋದ ಸಬ್ ಇನ್‌ಸ್ಪೆಕ್ಟರಿಗೆ ವಾಸಪ್ಪಗೌಡರ ಮತ್ತು ಗೋವಿಂದಗೌಡರ ಹೆಸರು ಹೇಳಿ 'ಹೆದರಿಸಲು' ಯತ್ನಿಸಿದರೂ ಅವರು ಜಗ್ಗದೆ ಬಂಧಿಸಿದರೆಂದು ತಿಳಿದುಬಂದಿದೆ.

## ಸಾರ್ವಜನಿಕ ವಿದ್ಯಾರ್ಥಿ ನಿಲಯಗಳಿಗೆ ಅರ್ಜಿ ಆಹ್ವಾನ

ಕೊಪ್ಪ: 1986-87ನೇ ಸಾಲಿಗೆ ಕೊಪ್ಪ ತಾಲ್ಲೂಕಿನಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯಿಂದ ನಡೆಯುತ್ತಿರುವ ಸಾರ್ವಜನಿಕ ಬಾಲಕರ ವಿದ್ಯಾರ್ಥಿ ನಿಲಯ, ಬಾಳಗಡಿ, ಕೊಪ್ಪ ಮತ್ತು ಸಾರ್ವಜನಿಕ ಬಾಲಕಿಯರ ವಿದ್ಯಾರ್ಥಿ ನಿಲಯ ಬಾಳೆಗಡಿ, ಸಾರ್ವಜನಿಕ ಬಾಲಕರ ವಿದ್ಯಾರ್ಥಿ ನಿಲಯ. ಕಮ್ಮರಡಿ ಹಾಗೂ ಕೊಪ್ಪ ಟೌನ್ ಮತ್ತು ಬಸರೀಕಟ್ಟೆಗಳಲ್ಲಿರುವ ಹಿಂದುಳಿದ ವರ್ಗ ಹಾಗೂ ಅಲ್ಪ ಸಂಖ್ಯಾತರ ವಿದ್ಯಾರ್ಥಿ ನಿಲಯಗಳನ್ನು 1986ನೇ ಜೂನ್ ತಿಂಗಳಿನಿಂದ ಪ್ರಾರಂಭಿಸಲಾಗುವುದು. ವಿದ್ಯಾರ್ಥಿಗಳ ಸಂಖ್ಯೆ ಮತ್ತು ಭರ್ತಿ ಮಾಡುವ ವಿಧಾನ, ಸರ್ಕಾರದಿಂದ ನಿಗದಿಪಡಿಸಿದ ಪ್ರಮಾಣಕ್ಕೆ ಅನುಗುಣವಾಗಿರುತ್ತದೆ. ಅರ್ಜಿಗಳನ್ನು ಮೇ 2ನೇ ತಾರೀಖಿನಿಂದ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಕಚೇರಿಯಲ್ಲಿ ಪಡೆಯಬಹುದು. ಭರ್ತಿ ಮಾಡಿದ ಅರ್ಜಿಗಳನ್ನು ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಕಚೇರಿ, ಬಾಳಗಡಿ, ಕೊಪ್ಪ ಇವರಿಗೆ ಸಲ್ಲಿಸಲು ಕಡೇ ದಿನಾಂಕ 28-5-1986.

ಹೆಚ್ಚಿನ ಮಾಹಿತಿಗೆ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಕಚೇರಿಯಲ್ಲಿ [illegible]

## ಕಳಕಳಿ ಅರ್ಥವಾಗುವುದೆ?

ಪ್ರಿಯ ಓದುಗರೆ,

ಈ ವಾರ 'ವೇದಿಕೆ'ಯಲ್ಲಿ ಕಿಗ್ಗದ ಸಹಪಂಕ್ತಿ ಭೋಜನದ ವಿಚಾರದ ಬಗ್ಗೆ ಓದುಗರಿಂದ ಬಂದ ಹಲವು ಪತ್ರಗಳನ್ನು ಪ್ರಕಟಿಸಿದೆ.

ಹೀಗೆ ತಮ್ಮ **ಸರ್ವತೋಮುಖವಾದ** ಅಭಿಪ್ರಾಯಗಳನ್ನು ಬರೆದು ತಿಳಿಸಿದ ಎಲ್ಲರಿಗೂ ಅಭಿನಂದನೆಗಳು.

ಈ ಪತ್ರಗಳಲ್ಲಿ ವ್ಯಕ್ತವಾದ **ವಿಚಾರಗಳಿಗೆ** ಮತ್ತೆ ಪ್ರತಿಕ್ರಿಯೆ ವ್ಯಕ್ತಪಡಿಸ ಬಯಸುವವರು ಬರೆಯಬಹುದು. ಬರಹಗಳು ಆದಷ್ಟೂ ಸಂಕ್ಷಿಪ್ತವಾಗಿರಲಿ. ಆಯ್ದ ಪ್ರತಿಕ್ರಿಯೆಗಳನ್ನು ಪ್ರಕಟಿಸಲಾಗುವುದು.

ಈ **ವಿಚಾರಗಳ** ಬಗ್ಗೆ ದೇವಸ್ಥಾನದ **ಆಡಳಿತ** ಸಮಿತಿಯವರು ತಮ್ಮ ಯಾವತ್ತೂ ಅಭಿಪ್ರಾಯಗಳನ್ನು ಸಾರ್ವಜನಿಕರ ಉಪಯೋಗಕ್ಕಾಗಿ ಬಹಿರಂಗಪಡಿಸಬೇಕೆಂದು ಮತ್ತೊಮ್ಮೆ ಆಹ್ವಾನಿಸುತ್ತಿದ್ದೇವೆ.

ಇಷ್ಟೆಲ್ಲ **ಭಾವನೆಗಳು**, ಯೋಚನೆಗಳು ಸಮಾಜದ ಗರ್ಭದೊಳಗೇ ಅಡಗಿ ಹೊಗೆಯಾಡಿ **ಸ್ಫೋಟಿಸುವ** ಬದಲು ಸರಿಯಾದ ಮಾರ್ಗವೊಂದರ ಮೂಲಕ ಹೊರಗೆ ಪ್ರಕಟಗೊಂಡು **ಎಲ್ಲರ ಪ್ರಯತ್ನ**ದಿಂದ ಸೌಹಾರ್ದಯುತವಾಗಿ ಶಮನಗೊಳ್ಳಲಿ ಎಂಬ ಪ್ರಾಮಾಣಿಕ ಸದುದ್ದೇಶದಿಂದ ಆರಂಭಿಸಿದ ಈ ಯತ್ನವನ್ನು ಸಂಬಂಧಪಟ್ಟ ಎಲ್ಲರೂ ಅರ್ಥ ಮಾಡಿಕೊಳ್ಳುವ **ವಿಶಾಲ ಮನಸ್ಸು** ತೋರಲಿ; ಇದರಲ್ಲಿ ಕುಹಕ ರಾಜಕೀಯವನ್ನು ಕಾಣುವ ಸಂಕುಚಿತ **ದೃಷ್ಟಿ** ತೋರದಿರಲಿ; ಎಲ್ಲರಿಗೂ ಒಳ್ಳೆಯದಾಗ ಬೇಕಾದ ಒಂದು ವಿಚಾರದಲ್ಲಿ ಎಲ್ಲರೂ **ತೆರೆದ** ಮನಸ್ಸಿನಿಂದ ಸಮೂಹ ಚಿಂತನೆ ನಡೆಸಿ, ನಮ್ಮ ನಮ್ಮ ದೋಷಗಳನ್ನು ವಿಶಾಲ ಮನಸ್ಸಿನಿಂದ ಒಪ್ಪಿ ತಿದ್ದಿಕೊಂಡು ಒಟ್ಟಿಗೆ ನಗುನಗುತ್ತ ಬಾಳೋಣ–ಇಂಥ ನಗುವಿನ **ನಾಳೆಗೆ** ತಳಹದಿ ಹಾಕೋಣ—

ಎಂದು ಕಳಕಳಿಯಿಂದ,

—ಸಂಪಾದಕ.

# ವೇದಿಕೆ

# ವಿಚಾರಗಳ ಸಮುದ್ರ ಮಥನ: 'ಸಹಪಂಕ್ತಿ ಭೋಜನ'ವೇ ಕಡಗೋಲು

## ಜಾತೀಯತೆ

ನೋಡಲ್ಲಿ ನಡೆಯುತಿದೆ ಭಕ್ತರಾ ಸೇವೆಯು
ಜನಮನದಲಿ ತುಂಬಿದೆ ಜಾತಿಯಾ ಭಾವವು
ದೇವರಿಗೇ ಇಲ್ಲದಾ ಭೇದ ಭಾವನೆಯು
ಭಕ್ತರಲಿ ತುಂಬಿದೆ ಜಾತಿಯಾ ಕಾವು

ದೇವರ ಪ್ರಸಾದ ಪಡೆಯಲೂ ಕೊಂದರೆ
ಊಟಕೆ ಪಂಕ್ತಿಯು ಬೇರೆ ಬೇರೆಯಾದರೆ
ಇದಕ್ಕೆ ಮದ್ದಾಗಿ ಆ ಪೋಲೀಸರೇ ಬಂದರೆ
ಮುಗಿಯುವುದು ಭಂಡರಾ ಜೇಬಿನಾ ಚಿಲ್ಲರೆ

ನಾವೆಲ್ಲ ಒಂದೇ ಎಂದೆಲ್ಲಾ ಹೇಳುವರು
ಜಾತಿಯಾ ವಿರೋಧಿಸಿ ಲೇಖನಾ ಬರೆವರು
ನೋಡಲ್ಲೂ ಜಾತಿ ವಿರೋಧಿಯಾಗಿ ಕಾಣುವರು
ಇತರರು ಮುಟ್ಟಿದಾಗ ಬಂದು ಸ್ನಾನ ಮಾಡುವರು

ನಾವೆಲ್ಲ ಕುಡಿಯುವಾ ನೀರೂ ಒಂದೇ
ಕೊಂಡು ಹೊರ ಬಿಡುವಾ ಗಾಳಿಯೂ ಒಂದೇ
ನಾವು ಮೆಟ್ಟಿರುವ ಭೂಮಿಯೂ ಒಂದೇ
ಭೇದ ಭಾವ ಮನಸಿನಾ ಕಲ್ಪನೆಯು ಎಂದೆ

'ಮುಂಜಾವು' ಪತ್ರಿಕೆ ಜಾತಿಯಾ ವಿರೋಧಿಸಿತು
ಸಂಪಾದಕರ ಮನ ಭೇದ ನೋಡಿ ನೊಂದಿತು
ಇದಕಾಗಿ ಜನರಾ ಪ್ರತಿಕ್ರಿಯೆ ಬಂದಿತ್ತು
ಇದರಿಂದಲಾದರೂ ಸಾಮರಸ್ಯವಾದೀತು

—**ಕೆ. ಪಿ. ಗಣಪತಿ,**
ಸತ್ತೀಕಲ್ಲು.

## 'ವೇದ ವಿದ್ಯೆ' ಕಲಿತವರ ನಯವಂಚಕತನ

ಕಿಗ್ಗ ದೇವಸ್ಥಾನದಲ್ಲಿ ಸಹಪಂಕ್ತಿ ಊಟದ ಬಗ್ಗೆ: ಈ ಬಗೆಗಿನ ಕನ್ವೀನರ್ ರಾಯರ ಅಭಿಪ್ರಾಯವನ್ನು ಅವರಂಥ ಹಲವರ ಪ್ರಾತಿನಿಧಿಕ ಅಭಿಪ್ರಾಯ ಎಂದೇ ತಿಳಿಯಬಹುದು.

ದೇವಸ್ಥಾನಗಳಲ್ಲಿ ನಡೆಯುವ ಇಂಥ ಎಲ್ಲ ಕಾರ್ಯಕ್ರಮಗಳೂ ಜಾತಿ ವ್ಯವಸ್ಥೆಯನ್ನು ಸಾಕಿಕೊಂಡು ಬರುವ ಗೊಬ್ಬರಗಳೇ. ಆದ್ದರಿಂದ ಇಂಥ ಕಾರ್ಯಕ್ರಮಗಳನ್ನೇ—ಅರ್ಥಾತ್ ಇವುಗಳ ಹಿಂದಿರುವ ದೇವರ ಕಲ್ಪನೆಯನ್ನೇ—ಅಳಿಸಿ ಹಾಕುವುದು ಸಹಪಂಕ್ತಿಗಾಗಿ ತಗಾದೆ ಮಾಡುವವರ ಗುರಿಯಾಗುವುದು ಹೆಚ್ಚು ಸಮಂಜಸ.

ಅದಿರಲಿ. ಈ ಋತ್ವಿಜರೆಂಬುವರು ಯಾರಂತೆ? ಅವರೇನೂ ಆಕಾಶದಿಂದಿಳಿದು ಬರಲಿಲ್ಲ ತಾನೆ? ಅವರು ಕಲಿತ ಅಷ್ಟಿಷ್ಟು ವೇದ ಮಂತ್ರಗಳೆಂಬ ವಿದ್ಯೆ ಮನುಷ್ಯ—ಮನುಷ್ಯರಲ್ಲಿ ಭೇದ ಮಾಡುವುದನ್ನೇ ಅವರಿಗೆ ಕಲಿಸಿದ್ದೇ? ವಿದ್ಯೆಯಿಂದ ಅದೂ ವೇದ ವಿದ್ಯೆಯಿಂದ—ವಿನಯವನ್ನೂ, ಮಾನವೀಯತೆಯನ್ನೂ ಅವರು ಕಲಿತಿದ್ದರೆ, ಅದು ವೇದ ವಿದ್ಯೆಗೆ ಅವರು ಮಾಡುದ ಅಪಮಾನವೇ ಸರಿ.

ಬ್ರಾಹ್ಮಣರು ನೇಗಿಲು ಹಿಡಿಯಬಾರದೆಂದು ಶಾಸ್ತ್ರವಂತೆ! ಅಂದರೆ ಇಂಥ ಶಾಸ್ತ್ರ ಮಾಡಿದವರೂ, ಅವರ ಹಿಂಬಾಲಕರೂ. ಬೇರೆಯವರು ದುಡಿದಿದ್ದನ್ನು ನಿರಂತರವಾಗಿ ತಿನ್ನಲು ಏನಾದರೊಂದು ವ್ಯವಸ್ಥೆ ಮಾಡಿಕೊಳ್ಳಲೇ ಬೇಕಾಯಿತಲ್ಲ! ದುಡಿಯದೆ ತಿನ್ನುವ ಹಂಚಿಕೆ; ಹಾಗೆ ತಿನ್ನುವಾಗಲೂ ದುಡಿದವರಿಗಿಂತ ಮೊದಲು, ಅವರಿಂದ ಪ್ರತ್ಯೇಕವಾಗಿ ಮೇಲೆ ಕೂತು ಪುಷ್ಕಳವಾಗಿ ತಿನ್ನುವ ಹಂಚಿಕೆ; ಪಾಪ ಪ್ರಜ್ಞೆ ಕಾಡಬಾರದೆಂಬುದಕ್ಕೆ, ಹಾಗೆ ಮಾಡಲು ಶಾಸ್ತ್ರದ ಮುದ್ರೆ! ಹೇಗಿದೆ ನೋಡಿ ನಯವಂಚಕತನ !

ಒಟ್ಟಿನಲ್ಲಿ ಮನುಷ್ಯರ ನಡುವೆ ಸಹಪಂಕ್ತಿ ಭೋಜನಕ್ಕೆ ನನ್ನ ಪೂರ್ಣ ಬೆಂಬಲವಿದೆ. ಸ್ನಾನ ಮಾಡದವರ ನಡುವೆ ಕೂತು ಉಣ್ಣಲು ಇಷ್ಟವಿಲ್ಲದವರು (ದೇವರ ಪ್ರಸಾದ ಬೇಡ ಎಂಬ ಧೈರ್ಯವಿದ್ದರೆ) ತಮ್ಮ ತಮ್ಮ ಮನೆಗಳಲ್ಲೇ ಯಥೇಚ್ಛ ಸ್ನಾನ ಮಾಡಿ ಊಟ ಮಾಡಿಕೊಳ್ಳಬಹುದು.

ಮೀನಾಕ್ಷಿ ಪುರಂನಂಥ ಪ್ರಕರಣಗಳು ಮರುಕಳಿಸಬಾರದೆಂಬ ಕಳಕಳಿ ಏನಾದರೂ ಹಾಗೆಂದು ಕರೆದು ಕೊಳ್ಳುವ ಹಿಂದೂಗಳಿಗಿದ್ದರೆ, ಸಹಪಂಕ್ತಿ ಭೋಜನಕ್ಕೆ ಒಪ್ಪುವುದು ಅವರಿಗೇ ಅಗತ್ಯ, ಅನಿವಾರ್ಯ.

—**ಎಚ್. ಸುಂದರರಾವ್,**
ಬಿ. ಸಿ. ರೋಡು, ದ. ಕ.

## ಋತ್ವಿಜರೇನು ದೇವರಲ್ಲ

ಎಲ್ಲರಿಗೂ ಗೊತ್ತಿರುವಂತೆ ಕಿಗ್ಗದ ದೇವರು ಹಿಂದೂಗಳ ದೇವರು. ಹಿಂದೂ ಅಂದರೆ ಬ್ರಾಹ್ಮಣ, ಒಕ್ಕಲಿಗ, ಹರಿಜನ ಮುಂತಾದ ಎಲ್ಲಾ ಕೋಮುಗಳು ಇಲ್ಲಿ ಸೇರುತ್ತವೆ. ಇಲ್ಲಿ ನಡೆಯುವ ರುದ್ರಹೋಮ ಮುಂತಾದ ಲೋಕ ಕಲ್ಯಾಣ ಕೆಲಸಗಳಿಗೆ ಎಲ್ಲಾ ಜಾತಿಯವರು ಕಾಣಿಕೆ, ಸಹಕಾರ ನೀಡುತ್ತಾರೆ. ಅಂದ ಮೇಲೆ ಸಹಪಂಕ್ತಿ ಭೋಜನ ಏಕೆ ಮಾಡ ಬಾರದು? ಇನ್ನು ಮುಂದೆ ಇಲ್ಲಿ ನಡೆಯುವ ಧಾರ್ಮಿಕ ಸಮಾರಂಭಗಳಲ್ಲಿ ಋತ್ವಿಜರು ಸಹ ಹರಿಜನ ಹಾಗೂ ಇತರೇ ಪಂಗಡಗಳ ಜೊತೆಯಲ್ಲಿ ಸಹಭೋಜನ ನಡೆಸಲಿ (ಋತ್ವಿಜರೇನು ದೇವರಲ್ಲ.) ಹಿಂದೂಗಳಾದ ನಾವೆಲ್ಲಾ ಒಂದಾಗುವುದು ಯಾವಾಗ? ಕನಕದಾಸ ಹರಿಜನನಲ್ಲವೇ? ಅವನಿಗೆ ದೇವರು ದರ್ಶನ ನೀಡಿರುವಾಗ ಇವರೇಕೆ ಹೀಗೆ?

ಸಮಾಜ ಕಲ್ಯಾಣ ಇಲಾಖೆಯವರು ಚಂದ್ರಗುತ್ತಿಗೆ ಗಮನ ಹರಿಸಿದಂತೆ ಇಲ್ಲಿಗೂ ಗಮನ ಹರಿಸಲಿ.

—**ಶಿವಶಂಕರ ಭಟ್ಟ,** ಹಿರೇಗದ್ದೆ

## ಹಿಂದವಃ ಸೋದರಾಃ ಸರ್ವೇ

ಕೇವಲ ಕಿಗ್ಗ ದೇವಸ್ಥಾನದ ವ್ಯವಸ್ಥೆಗಿಂತ ನಮ್ಮ ಸಮಾಜದಲ್ಲಿ ಆಗಬೇಕಾದ ಬದಲಾವಣೆ ಬಗ್ಗೆ ನನ್ನ ಅನ್ನಿಸಿಕೆ ತಿಳಿಸಲು ಇಷ್ಟಪಡುತ್ತೇನೆ.

ಸಹಪಂಕ್ತಿ ಭೋಜನ ನಡೆಯಬೇಕಾದ್ದು ಸರಿಯಾದ ವಿಚಾರವೇ. ಬಹಳ ಹಿಂದಿನ ದಿನಗಳಲ್ಲಿ ಕೆಲವು ಜನರನ್ನು ಶೂದ್ರರೆಂದು ದೂರವಿಡುತ್ತಿದ್ದರು. ಕಾರಣ ಆತನು ಅಸಂಸ್ಕೃತನೆಂದು, ಅವಿದ್ಯಾವಂತನೆಂದು, ಅನಾಗರಿಕನೆಂದು. ಆದರೆ ಇಂದು ಯಾವುದೇ ಜಾತಿಯ ಆಧಾರದ ಮೇಲೆ ವ್ಯಕ್ತಿಗಳ ವಿದ್ಯೆ, ಸಂಸ್ಕೃತಿ, ನಾಗರಿಕತೆಗಳನ್ನು ಅಳೆಯಲು ಬರುವುದಿಲ್ಲ. ಪ್ರತಿಯೊಬ್ಬರೂ ವಿದ್ಯಾವಂತರಾಗಿ ನಾಗರೀಕರಾಗಿ ಬಾಳುತ್ತಿರುವ ಕಾಲ ಇದು. ಪ್ರತಿಯೊಬ್ಬನೂ ಈ ಸಮಾಜದ ಸದಸ್ಯನಾದ್ದರಿಂದ ಅದರ ವ್ಯವಸ್ಥೆಗಳಲ್ಲಿ ಪಾಲ್ಗೊಳ್ಳಲೇ ಬೇಕಾಗುತ್ತದೆ. ಧಾರ್ಮಿಕವಾಗಿಯೂ ಹಾಗೂ ರಾಷ್ಟ್ರೀಯವಾಗಿಯೂ ಈ ಜಾತಿ ವ್ಯವಸ್ಥೆ ಮಾರಕವಾದದ್ದು. ಇದನ್ನು ಕೇವಲ ಸಹಪಂಕ್ತಿ ಭೋಜನ, ಅಂತರ್ ಜಾತಿ ವಿವಾಹ, ಇಂತಹ ಕಾರ್ಯಕ್ರಮಗಳನ್ನು ನಡೆಸುವುದರಿಂದ ಮಾತ್ರ ತೊಡೆದು ಹಾಕಲು ಸಾಧ್ಯವಿಲ್ಲ. ಮೊದಲು ನಾನು ನನ್ನ ಜಾತಿಯನ್ನು ಹಾಗೂ ನನ್ನೆದುರು ಇರುವವನ ಜಾತಿಯನ್ನು ಮರೆಯಬೇಕು. ನಾವೆಲ್ಲರೂ ಹಿಂದುಗಳು, ದೇವರೆದುರಿನಲ್ಲಿ

(3ನೇ ಪುಟಕ್ಕೆ)

## ಸಂಪ್ರದಾಯ ವಿರೋಧಿ ರಾಜಕೀಯ ದುಷ್ಟ ಶಕ್ತಿಗಳಿಗೆ ಆಮಂತ್ರಣವಿಲ್ಲ

ಅನಾದಿ ಕಾಲದಿಂದಲೂ ನಾವು ಸಂಪ್ರದಾಯ ಬದ್ಧರು. ಅದನ್ನು ವಿರೋಧಿಸುವವರಿಗೆ ನಾವಂತೂ ಗೌರವ ಕೊಡುವುದಿಲ್ಲ. **ಅವರಿಂದ ಯಾವುದೇ ಆರ್ಥಿಕ ಸಹಕಾರ ನಮಗೆ ಬೇಕಿಲ್ಲ. ಧಾರ್ಮಿಕ ಸಂಪ್ರದಾಯ ವಿರೋಧಿಗಳು ರಾಜಕೀಯ ಕ್ಷೇತ್ರಕ್ಕೆ ಮಾತ್ರ ಮೀಸಲಾಗಿರಲಿ ನಾವಂತೂ ಬಹಳಾ ದೊಡ್ಡ ಯೋಜನೆಯಲ್ಲಿ ನಡೆಸುವ ಕಾರ್ಯಕ್ರಮವನ್ನು ಚಿಕ್ಕದಾಗಿ, ಚೊಕ್ಕವಾಗಿ ನಡೆಸಿಕೊಂಡು ಹೋಗುವುದಕ್ಕೆ ಪರಮಾತ್ಮ ಸಾಕಷ್ಟು ಪ್ರೇರಣೆ ನೀಡುತ್ತಾನೆ.** ಈ ಬಗ್ಗೆ ನನಗೆ ಅಪಾರ ನಂಬುಗೆ ಇದೆ.

ಅಲ್ಲದೆ, ಸ್ಥಳೀಯ ಯಾವುದೇ ಭಕ್ತಾದಿಗಳು ಹಾಗೂ ಯುವಕರು ಸಹ ಸ್ವಯಂ ತಾವೇ ಮುಂದಾಳುಗಳಾಗಿ ಶ್ರೀ ಸ್ವಾಮಿಯ ಸಕಲ ಕಾರ್ಯಗಳಲ್ಲಿ ಸ್ವಯಂ ಪ್ರೇರಣೆಯಿಂದ ದುಡಿದಿದ್ದಾರೆ. ಇದನ್ನು ನಾನು ಸ್ವಯಂ ಮನಗಂಡ ವಿಚಾರ. ಸ್ಥಳೀಯರು ಯಾರೂ ವಿರೋಧಿಸುವುದಿಲ್ಲ. **ಈ ಸಂಪ್ರದಾಯ ಬದ್ಧವಾದ ದೇವತಾ ಕಾರ್ಯದಲ್ಲಿ ರಾಜಕೀಯ ನಡೆಸುವ ಯಾವುದೇ ದುಷ್ಟ ಶಕ್ತಿಗಳಿಗೆ ನಮ್ಮ ಆಮಂತ್ರಣವಿಲ್ಲ.**

—**ಎಸ್. ಗುಂಡಣ್ಣ ಹೆಗ್ಡೆ,**
ಧರ್ಮದರ್ಶಿ ಮಂಡಳಿ ಸದಸ್ಯರು.
ಮತ್ತು ತಾ|| ಅ|| ಮಂಡಳಿಯ
ಮಾಜಿ ಸದಸ್ಯರು, ಕಿಗ್ಗ,

## ವೈಜ್ಞಾನಿಕ ಪ್ರಗತಿಯ ತುತ್ತ ತುದಿಯಲ್ಲಿ ತಲೆಕೆಡಿಸುವ ಕ್ಷುಲ್ಲಕ ವಿಚಾರ

ವೈಜ್ಞಾನಿಕ ಪ್ರಗತಿಯ ತುತ್ತ ತುದಿಯಿಂದ ಇಪ್ಪತ್ತೊಂದನೆ ಶತಮಾನಕ್ಕೆ ಪಾದಾರ್ಪಣ ಮಾಡುತ್ತಿರುವ ಈ ಸಮಯದಲ್ಲಿ ಇಂತಹ ಕ್ಷುಲ್ಲಕ ಸಂಪ್ರದಾಯದ ಬಗ್ಗೆ ತಲೆಕೆಡಿಸಿಕೊಳ್ಳುವುದು ಸೂಕ್ತವಲ್ಲದಿರಬಹುದು ಆದರೆ ಮನುಷ್ಯರ ಅಸ್ತಿತ್ವದ ಅಡಿಗಲ್ಲಾದ ಸಾಮಾಜಿಕ ಸ್ಥಾನಮಾನಗಳ ಸಮಾನತೆಗಾಗಿ ಧ್ವನಿಯೆತ್ತುವುದು ನಿಜಕ್ಕೂ ಸ್ವಾಗತಾರ್ಹ. ಇದರ ಹರಹು ಕೇವಲ ಸಹಪಂಕ್ತಿಗೆ ಮಾತ್ರ ಸೀಮಿತವಾಗಿರದೆ ವೈಶಾಲ್ಯ ಪಡೆಯ ಬೇಕಾಗಿರುವುದೂ ಅಷ್ಟೇ ಮುಖ್ಯ.

ಜಡ್ಡುಗಟ್ಟಿ ನಿಂತ ಸಾಂಪ್ರದಾಯಿಕ ಸೂತ್ರಗಳಿಂದ ಪರಸ್ಪರ ಬಂಧಿಸಿಕೊಂಡು ಸಮಾಜದ ಚಲನವಲನಗಳ ವಿಚಾರ ಪ್ರವಾಹದ ಗತಿಯನ್ನು ನಿರಂತರ ಸ್ತಬ್ಧಗೊಳಿಸುವ ದುಷ್ಟ ವ್ಯವಸ್ಥೆಯ ಬಗ್ಗೆ ಸಮಸ್ತ ಯುವ ಜನಾಂಗ ಚಿಂತಿಸಬೇಕಾಗಿದೆ.

ಪ್ರಸ್ತುತ ಕಿಗ್ಗ ದೇವಸ್ಥಾನದ ರುದ್ರಹೋಮದ ವಿವಾದಾತ್ಮಕ 'ಸಹಪಂಕ್ತಿ ಭೋಜನ' ಪ್ರಜ್ಞಾವಂತ ಜನ ನಿಜಕ್ಕೂ ಹೊರಳಿ ನೋಡಬೇಕಾದ ಅಂಶ. ಕನ್ವೀನರ್ ತಿಳಿಸಿದಂತೆ ಊರಿನ ಹಿರಿಯ ಬ್ರಾಹ್ಮಣೇತರರು ಹಳೆಯ ಕ್ರಮವನ್ನೇ ಒಪ್ಪುತ್ತಾರಂತೆ. ಇದು ಉದರಂಭರಣಕ್ಕಾಗಿ ನಮ್ಮ ಜನ ಯಾವ ಧೋರಣೆಯೊಂದಿಗಾದರೂ ಸುಲಭವಾಗಿ ರಾಜಿ ಮಾಡಿಕೊಳ್ಳುವ ಪ್ರವೃತ್ತಿಯೇ

(3ನೇ ಪುಟಕ್ಕೆ)

ವೇದಿಕೆ

## ವಿಚಾರಗಳ ಸಮುದ್ರಮಥನ: 'ಸಹಪಂಕ್ತಿ ಭೋಜನ'ವೆ ಕಡಗೋ

# ಸಹಪಂಕ್ತಿ ಭೋಜನ — ಒಂದು ಸಮೀಕ್ಷಾತ್ಮಕ ಅವಲೋಕನ

ಕಿಗ್ಗ ದೇವಸ್ಥಾನದಲ್ಲಿ ಸಹಪಂಕ್ತಿ ಭೋಜನದ ಬಗ್ಗೆ ಉಂಟಾದ ವಿರೋಧಾಭಾಸಗೊಂದಲಗಳು ಒಟ್ಟು ಸಮಾಜಿಕ ಜೀವನದಲ್ಲಿ ಇರುವ ಧ್ವಂದ್ವಗಳ ಪ್ರತಿಧ್ವನಿಯಾಗಿವೆ. ಒಂದು ಧರ್ಮಕ್ಕೆ ಸೇರಿದವರು ಎಂದಾಗ ಆ ಧರ್ಮದ ಕಾರ್ಯಕ್ರಮಗಳಲ್ಲಿ ಎಲ್ಲರಿಗೂ ಮುಕ್ತ ಹಾಗೂ ಸಮಾನ ಅವಕಾಶವಿರಬೇಕು. ಕಿಗ್ಗ ದೇವಸ್ಥಾನದ ಪ್ರಸಂಗ ಅಲ್ಲಿ ಸೇರಿರುವ ಭಕ್ತಾದಿಗಳೆಲ್ಲರೂ ಒಂದು ಧರ್ಮಕ್ಕೆ ಸೇರಿದವರೆಂದು ಹೇಳಿಕೊಂಡರೂ, ಹಾಗಲ್ಲ ಎಂಬುದನ್ನು ಸಾಬೀತು ಮಾಡಿದೆ. 'ನಾವೆಲ್ಲ ಹಿಂದುಗಳು ಒಂದು' ಎಂದು ಹೇಳಿಕೊಳ್ಳುವಲ್ಲಿಯೇ ಇರುವ ಅವಮಾನಕರ ಕೀಳರಿಮೆಯ ನೋವನ್ನು ಗುರುತಿಸಲು ಈ ಪ್ರಕರಣ ಅನುವು ಮಾಡಿಕೊಟ್ಟಿದೆ. ಶೂದ್ರರು–ಪಂಚಮರು ತಾವು ಹಿಂದುಗಳು ಎಂದು ಹೇಳಿಕೊಳ್ಳುವಲ್ಲಿಯೇ ಅವರು ನಾಲ್ಕನೆಯ ಇಲ್ಲವೆ ಐದನೆಯ ದರ್ಜೆಯ ಹಿಂದುಗಳಾಗಿ ಬಿಡುತ್ತಾರೆ. ವರ್ಣಾಶ್ರಮ ವ್ಯವಸ್ಥೆಯನ್ನು ಒಪ್ಪಿಕೊಂಡೂ ಹಿಂದೂ ಧರ್ಮವನ್ನು ಪುನರುತ್ಥಾನ ಮಾಡುವುದೆಂದರೆ ಧಾರ್ಮಿಕ ನಂಬುಗೆ ಉಳ್ಳವರನ್ನು ಹಲವು ದರ್ಜೆಗಳಲ್ಲಿ **ಸ್ಥಿರಗೊಳಿಸುವುದೆಂದೇ** ಅರ್ಥ.

ಕಿಗ್ಗದ ಸುತ್ತ ಮುತ್ತಲ ಭಕ್ತಾದಿಗಳನ್ನು ವಿಚಾರಿಸಿದಾಗ ಅವರು ನೀಡಿದ ವಿವರಣೆ ಹೀಗಿದೆ. (ಅವರಲ್ಲಿಒಬ್ಬರು ಧಾರ್ಮಿಕ ಸಮಿತಿಯ ಶೂದ್ರ ಸದಸ್ಯರೂ ಇದ್ದರು.) "ಏನು ಮಾಡುವುದು? ನಾವು ಕಿಗ್ಗಕ್ಕೆ ಬಾಳುವವರು. ಪರಂಪರೆಯ ನಂಬಿಕೆ ಉಳ್ಳವರು. **ನಾವು** ದೇವರು– ದೇವಾಲಯಗಳ ಬಗ್ಗೆ ಇರುವ ಭಕ್ತಿ–ಶ್ರದ್ಧೆಗಳನ್ನು ಬಿಟ್ಟು ಬಿಡುವಷ್ಟು ಮುಂದೆ ಹೋಗಲಾರೆವು. ಆದರೆ **ಋತ್ವಿಜರು** –ಸಹಪಂಕ್ತಿ ಭೋಜನದ ವ್ಯವಸ್ಥೆ ಇರುವುದಾದರೆ ಯಾವ ಹೋಮ ಹವನಾದಿಗಳಿಗೂ ಬರುವುದಿಲ್ಲ ಎನ್ನುತ್ತಾರೆ".

ಈ ಅಭಿಪ್ರಾಯದಲ್ಲಿ ಎಷ್ಟು ನೋವಿದೆ ಎಂದು ಊಹಿಸ ಬಹುದು. 'ಧಾರ್ಮಿಕ ಕಾರ್ಯ' ಎಂದು ಅವರು ಹೇಳುವ ಹೋಮ ಹವನಾದಿಗಳನ್ನು ಒಪ್ಪಿಕೊಳ್ಳ ಬೇಕೆಂದರೆ ಮೇಲು ಕೀಳೆಂಬ ಜಾತಿ ವ್ಯವಸ್ಥೆಯ ತಾರತಮ್ಯವನ್ನು ಸಹ ಒಪ್ಪಿಕೊಳ್ಳಬೇಕಾದ ಅನಿವಾರ್ಯತೆ ಪ್ರಾಪ್ತವಾಗಿದೆ.

ಅಲ್ಲಿಯೇ ಇದ್ದ ಕೆಲವು ತರುಣರಿಗೆ ಹೇಳಿದೆ–"ಯಾವುದು ನಿಮಗೆ ಅವಮಾನಕರ, ಅಮಾನವೀಯ ಎನಿಸುತ್ತದೆಯೋ ಅದರಿಂದ ದೂರವಿದ್ದುಬಿಡಿ" **ಅದಕ್ಕೆ,** "ನಾವು ನಿರ್ಲಿಪ್ತರಾಗುವುದೆಂದರೆ ಸಂವಿಧಾನ ವಿರೋಧಿಯಾದ ಜಾತಿಯ ಆಧಾರದ ಮೇಲು–ಕೀಳು –ಅಸ್ಪೃಶ್ಯಾದಿ ಆಚರಣೆಗಳಿಗೆ ಪರೋಕ್ಷವಾಗಿ ಪ್ರೋತ್ಸಾಹ ನೀಡಿದಂತೆಯೇ. ಸುಸಂಘಟಿತರಾಗಿ ಧಾರ್ಮಿಕ ಸಮಾನತೆಗಾಗಿ ಹೋರಾಡುವುದೊಂದೇ ನಮಗೆ ಉಳಿದಿರುವ ದಾರಿ"–ಎಂದು ಆ ತರುಣರು ವಾದಿಸಿದರು.

ಕನ್ನೀನರ್ ವ್ಯಕ್ತಪಡಿಸಿದ (30-3-86 ರ 'ಮುಂಜಾವು') "ಒಕ್ಕಲಿಗರೇ ಅವರಿಗಿಂತ ಕೀಳು ಜಾತಿಯವರನ್ನು ದೇವಸ್ಥಾನದೊಳಕ್ಕೆ ಬರಲು ಮೈಲಿಗೆಯಾಗುವುದೆಂದು ತಡೆದರು" ಎಂಬ ಹೇಳಿಕೆಯತ್ತ ಗಮನ ಸೆಳೆದಾಗ ಈ ಅಭಿಪ್ರಾಯ ಶೂದ್ರ ಸಮಾಜವನ್ನು ಒಡೆಯುವ ಹುನ್ನಾರ ಎಂದು ವಾದಿಸಿದ ಅವರು "ಕೆಲವು ಒಕ್ಕಲಿಗ ಹಿರಿಯರಿಗೆ ಋತ್ವಿಜರಂತೆಯೇ ಪುರೋಹಿತಶಾಹಿ ವ್ಯವಸ್ಥೆಯನ್ನು ಉಳಿಸಿಕೊಳ್ಳುವ ಮನಸ್ಸು ಇದ್ದಿರಬಹುದು ಆದರೆ ನಾವೆಲ್ಲ ಮುಕ್ತ ಮನಸ್ಸಿನಿಂದ ದಲಿತ ಬಂಧುಗಳ ಜೊತೆಯಲ್ಲಿ ಸಹಪಂಕ್ತಿ ಭೋಜನಕ್ಕೆ ಸಿದ್ಧ" ಎಂದರು.

ಈ ಹಿನ್ನೆಲೆಯಲ್ಲಿ ಸ್ಪಷ್ಟವಾಗುವ ಕೆಲವು ಅಂಶಗಳು ಹೀಗಿವೆ:

(ಅ) ಧಾರ್ಮಿಕ ವಿಧಿ–ನಿಯಮಗಳನ್ನು ಬಿಡಲು ಬ್ರಾಹ್ಮಣರು ಮಾತ್ರವಲ್ಲ ಕೆಲವು ಶೂದ್ರರೂ ಸಿದ್ಧರಿಲ್ಲ.

(ಆ) ಶೂದ್ರರಲ್ಲಿ ಹೆಚ್ಚಿನವರಿಗೆ ಧಾರ್ಮಿಕ ಕಾರ್ಯಕ್ರಮಗಳು ಎಲ್ಲರಿಗೂ ಮುಕ್ತವಾಗಬೇಕು, ಮೇಲು–ಕೀಳೆಂಬ ತಾರತಮ್ಯ ದೇವರ ಎದುರಿನಲ್ಲಿ ಸಲ್ಲದೆಂಬ ಭಾವವಿದೆ.

(ಇ) ಋತ್ವಜರಿಗೆ ಧಾರ್ಮಿಕ ವಿಧಿಗಳು ವರ್ಣ ವ್ಯವಸ್ಥೆಗೆ ಬದ್ಧವಾಗಿವೆ ಎನಿಸಿದೆ. ವರ್ಣಾಶ್ರಮ ಧರ್ಮವನ್ನು ಬಿಟ್ಟು ಧರ್ಮಕ್ಕೆ ಅರ್ಥವೇ ಇಲ್ಲ ಎಂಬ ನಿಲುವು ಅವರದು.

(ಈ) ದೇವರಲ್ಲಿ ನಂಬಿಕೆ ಇರಿಸಿಕೊಂಡೂ ಸಮಾನತೆಯ ಬಗ್ಗೆ ರಚನಾತ್ಮಕವಾಗಿ ತೊಡಗುವುದು 'ಧರ್ಮ ವಿರೋಧಿ' ಎಂಬ ಭಾವ ಹಲವು ಹಿರಿಯರಲ್ಲಿ ಬೇರೂರಿದೆ.

ಸಾಮಾಜಿಕ ಜೀವನ ನಿತ್ಯ ಪರಿವರ್ತನಶೀಲವಾದುದು. ಧರ್ಮ ಈ ಚಲನ ಶೀಲತೆಯನ್ನು ಕಳೆದುಕೊಂಡಾಗಲೇ ಈ ರೀತಿಯ ವಿರೋಧಾಭಾಸಗಳು ತಲೆ ಎತ್ತುತ್ತವೆ. ಇತಿಹಾಸದ ಪರಿಜ್ಞಾನ ಈ ದಿಶೆಯಲ್ಲಿ ಹೆಚ್ಚು ಬೆಳಕು ನೀಡಬಲ್ಲದು. ಬುದ್ಧ, ಬಸವಣ್ಣ, ಕನದಾಸ, ರಾಜರಾಮ್ ಮೋಹನರಾಯ್ ಸ್ವಾಮಿ ದಯಾನಂದ ಸರಸ್ವತಿ, ಸ್ವಾಮಿ ವಿವೇಕಾನಂದ, ಫುಲೆ–ಇವರೆಲ್ಲರ ಪ್ರಯತ್ನ ಧರ್ಮವನ್ನು ಪುರೋಗಾಮಿಯಾಗಿಸಿ ಸಾಮಾಜಿಕ ಜೀವನದ ಆಚಾರ–ವಿಚಾರಗಳ ದ್ವಂದ್ವಗಳನ್ನು ನೀಗಿಸುವುದೇ ಆಗಿದೆ. ಶ್ರೀ ಕುವೆಂಪುರವರ 'ಮನುಜಮತ ವಿಶ್ವಪಥ', 'ಆಧ್ಯಾತ್ಮ ಉಳಿಯಲಿ, ಮತಧರ್ಮ ಅಳಿಯಲಿ' ಎಂಬ ವಿಶ್ವಮಾನವ ಸಂದೇಶದ ಸೂತ್ರಗಳೂ ಇದೇ ಬಗೆಯ ಪ್ರಯತ್ನ.

ಇಲ್ಲಿ ಋತ್ವಿಜರು ಮತ್ತು ಶೂದ್ರರು ತಮ್ಮ ಆತ್ಮಶೋಧನೆಯನ್ನು ಮಾಡಿಕೊಳ್ಳಬೇಕಾಗಿದೆ. ಋತ್ವಿಜರು ಅವರೋ ಅವರ ಮಕ್ಕಳೊ ಯಾವುದೇ ವೃತ್ತಿಯಲ್ಲಿ ತೊಡಗಬಹುದೆಂಬ ಹಂತದಲ್ಲಿದ್ದಾರೆ. ಈ ಸ್ತರದಲ್ಲಿ ಅವರದು ಮುಕ್ತ ಮತ (open religion.) ಆದರೆ ಅದೇ ಅವರ ಪರಂಪರೆಯ ವೃತ್ತಿ ವಿದ್ಯೆಗಳಿಗೆ ಇತರ ಎಲ್ಲಾ ಜಾತಿಯವರನ್ನು ಇನ್ನೂ ದೂರ ಇಡಲಾಗಿದೆ. ಈ ಸ್ತರದಲ್ಲಿ ಅವರದು ಮುಚ್ಚಿದ ಮತ (closed religion) ಈ ದ್ವಂದ್ವದಿಂದ ಅವರು ಹೊರಗೆ ಬರಲು ಪ್ರಯತ್ನಿಸಬೇಕು. ಧಾರ್ಮಿಕ ವೃತ್ತಿ ವಿದ್ಯೆಗಳನ್ನು ಸಮಾಜದ ಎಲ್ಲರಿಗೂ ತೆರವಾಗಿಸಬೇಕು. ಸದ್ಯಕ್ಕೆ ಸಹಪಂಕ್ತಿ ಭೋಜನಕ್ಕಾದರೂ ಸಿದ್ಧರಾಗಬೇಕು.

(4ನೇ ಪುಟಕ್ಕೆ)

# ವಿಜ್ಞಾನಯುಗದಲ್ಲೂ ತಲೆ ಕೆಡಿಸುವ ವಿಚಾರ

(2ನೇ ಪುಟದಿಂದ)

ಆಗಿದೆ.

ಋತ್ವಿಜರು 'ಸಹಪಂಕ್ತಿ' ಕ್ರಮವನ್ನು ಒಪ್ಪುವುದಿಲ್ಲ ಎಂದು ಕನ್ವೀನರ್ ತಿಳಿಸಿದ್ದಾರೆ ಆದರೆ ಈ ಋತ್ವಿಜರಿಗೆ ಕಾಯಿಲೆಯಾದರೆ ಆಪರೇಷನ್ ಥಿಯೇಟರಿನ ಒಳಗಡೆ ಆಪರೇಷನ್ ಮಾಡಬೇಕಾದ ಡಾಕ್ಟರ್ ನಾನು ಶೂದ್ರ, ಹತ್ತಿರ ಬಂದರೆ ನಿಮಗೆ ಮೈಲಿಗೆಯಾಗುತ್ತದೆಂದು ದೂರ ನಿಂತರೆ ಪರಿಸ್ಥಿತಿ ಯೇನಾಗುವುದು? ಒಬ್ಬ ನ್ಯಾಯಾಧೀಶ "ನಾನು ಹರಿಜನ, ನಿಮಗೆ ನ್ಯಾಯದಾನ ಮಾಡಲಾರೆ" ಎಂದರೆ, ಒಬ್ಬ ಅಧ್ಯಾಪಕ ಋತ್ವಿಜ ಮಕ್ಕಳ ಹತ್ತಿರ ಹೋಗದಿದ್ದರೆ–ಪರಿಣಾಮ ಏನಾಗಬಹುದು? ಋತ್ವಿಜರು ಸಾವಿರಾರು ಮೈಲಿ ಪ್ರಯಾಣ ಮಾಡಬೇಕಾದ ಸಂದರ್ಭದಲ್ಲಿ ಜಾತಿ ಭೇದವಿಲ್ಲದೆ ಸಹ ಪ್ರಯಾಣಿಕರೊಂದಿಗೆ ಸಹಕರಿಸುವ ಮನೋಭಾವ ಬೆಳೆಸಿಕೊಳ್ಳದಿದ್ದರೆ ಋತ್ವಿಜರಿಗೆ ಪ್ರತ್ಯೇಕ ಸಾರಿಗೆ ವ್ಯವಸ್ಥೆಯನ್ನು ಸರಕಾರ ಮಾಡಲು ಸಾಧ್ಯವೆ? ಈ ಎಲ್ಲದರ ಬಗ್ಗೆ ಯೋಚಿಸುವುದು ಅಗತ್ಯವಲ್ಲವೆ?

ನಮ್ಮ ಸಂಸ್ಕೃತಿಯ, ಧರ್ಮದ ಹೆಸರಿನಲ್ಲಿ ಕುರುಡು ನಂಬಿಕೆ, ಮೌಢ್ಯಗಳಿಗೆ ವೈಜ್ಞಾನಿಕ ವಿಚಾರದ ಬಂಗಾರದ ನಕಲಿ ಮುಲಾಮನ್ನು ಹಚ್ಚಿ ಮುಗ್ಧ ಜನತೆಯನ್ನು ದಿಕ್ಕು ತಪ್ಪಿಸುವ ಕ್ರಮ ನಿಲ್ಲಬೇಕಾದರೆ ಪ್ರಜ್ಞಾವಂತರ ಸಂಖ್ಯೆ ಹೆಚ್ಚಲೇಬೇಕು.

ತಾವು ನಡೆಸುವ ಸಂಪ್ರದಾಯ ಮೌಢ್ಯದಿಂದ ಕೂಡಿದ್ದು ಎಂಬ ಅರಿವಿದ್ದೂ ಸ್ಪರ್ಧಾ ಕಾರಣದಿಂದಲೋ ಅಥವಾ ಸ್ವಾರ್ಥ ಕಾರಣದಿಂದಲೊ ಕೇವಲ ಯಾಂತ್ರಿಕವಾಗಿ ಮುಂದುವರಿಸಿಕೊಂಡು ಹೋಗುವುದು ಸಮಾಜದ ಏಳ್ಗೆಯ ದೃಷ್ಟಿಯಿಂದ ಪ್ರಗತಿಪರವಲ್ಲ. ಆದ್ದರಿಂದ ಕಿಗ್ಗಾ ದೇವಸ್ಥಾನದಲ್ಲಿ ರುದ್ರಹೋಮದ ಸಹಪಂಕ್ತಿ ಭೋಜನಕ್ಕೆ ಅವಕಾಶ ಮಾಡಿಕೊಡುವುದು ಸಮಾಜದ ಸ್ವಾಸ್ಥ್ಯದ ದೃಷ್ಟಿಯಿಂದ ಅಪೇಕ್ಷಣೀಯವಾದುದು.

—ಡಿ. ಜಿ. ರಮೇಶ್, ಎಂ.ಎ.,
ದ್ಯಾವಗೋಡು.

## ಹೋಮಕ್ಕೆ, ಪೂಜೆಗೆ ವ
## ಊಟಕ್ಕೂ ಮಡಿಯೆ

ಋತ್ವಿಜರು ಇತರೆಯವರ ಜೊತೆ ಟಕ್ಕೆ ಕುಳಿತರೆ ಅವರ 'ಮಡಿ'ಗೆ ಚ್ಯುತಿ ಟಾಗುತ್ತದೆ ಎಂಬ ಅಭಿಪ್ರಾಯ ಅ (ಮತ್ತು ಅವರನ್ನು ಸಮರ್ಥಿಸುವ ಇರುವಂತೆ ಕಾಣುತ್ತದೆ. ಮಡಿ ಹೋಮ ಪೂಜೆಗೆ ಬೇಕು. ಒಪ್ಪಿಗೆ. ಊಟಕ್ಕೂ ಯೆ?

(ಒಂದು ವೇಳೆ ಋತ್ವಿಜರ ಜಾ ಸೇರಿದವರೊಬ್ಬರು ಮಡಿಯಲ್ಲಿ ಇಲ್ಲದೆ ಆಕಸ್ಮಾತ್ ಅವರೊಂದಿಗೆ ಕೂತರೆ ಅ ಬಿಡುತ್ತಾರೆಯೆ? ಇಲ್ಲ ತಾನೆ? ಅಂ ಮೈಲಿಗೆ ಇತರೆಯವರಿಗೆ ಮಾತ್ರ ಅಲ್ಲ

—ಕಲ್ಕುಳಿ ಮರಿಯಪ್ಪ ಕ
ಶೃಂಗೇರಿ

## ಹಿಂದವಃ ಸೋದರಾ
## ಸರ್ವೇ

(2ನೇ ಪುಟದಿಂದ)

ನಾವೆಲ್ಲರೂ ಸಮಾನರು ಎಂಬ ಭಾವನೆ ಬೆ ಸಿಕೊಳ್ಳಬೇಕು. ಕೆಲವು ರಾಜಕೀಯ ಮ ಖಂಡರು ಪರಸ್ಪರ ಜಾತಿಯ ಗುಂಪುಗಾರಿ ದ್ವೇಷಗಳಿಗೆ ಕಾರಣರಾಗುತ್ತಿದ್ದಾರೆ. ಜನ ಇಂತಹವರನ್ನು ತಿರಸ್ಕರಿಸಬೇಕು.

ದೇವಸ್ಥಾನದಲ್ಲಿ ಭೋಜನದ ವ್ಯವಸ ಮಾಡುವಾಗ ಹೋಮ ಹವನಗಳನ್ನು ನ ಸಿರುವ ಋತ್ವಿಜರಿಗೆ ಮಾತ್ರ ಪ್ರತ್ಯೇಕವಾ ಒಂದು ಪಂಕ್ತಿಯನ್ನು ಮಾಡಬೇಕಾಗ ಹುದು (ಅವರ ಆಕ್ಷೇಪವಿಲ್ಲದಿದ್ದರೆ ಅದ ಅವಶ್ಯಕತೆ ಇಲ್ಲ). ಮತ್ತೆಲ್ಲರೂ ಸಹಪಂಕ್ತಿ ಯಲ್ಲಿ ಸ್ನೇಹಪೂರಿತವಾಗಿ ದೇವರ ಧ್ಯಾ ಮಾಡುತ್ತಾ ಊಟ ಮಾಡುವುದು ನಿಜಕ್ಕೂ ಹಿಂದೂ ಧರ್ಮದ ಭದ್ರತೆಯ ಒಂದು ಮೈ ಲಿಗಲ್ಲಾಗಬಹುದು.

ಆದರೆ ಈ ವ್ಯವಸ್ಥೆಯಲ್ಲಿ ಯಾವೊಬ್ಬ ಹಿಂದುವೂ ಪ್ರತ್ಯೇಕ ಉಳಿಯಬಾರದು. ಹರಿಜನರಿರಲಿ, ಕೊರಮರಿರಲಿ, ಅವರೆಲ್ಲರನ್ನೂ ನಮ್ಮ ನಡುವೆ ಸ್ವಲ್ಪವೂ ಭೇದವಿಲ್ಲದೆ ಸೇರಿಸಿಕೊಳ್ಳಬೇಕು. ಹಾಗೆ ಸೇರಿಸಿಕೊಂಡಾಗ, ನಮ್ಮಂತೆ ಅವರೂ ಪ್ರಗತಿ ಹೊಂದುತ್ತಾ ಬರುತ್ತಾರೆ.

ಆದರೆ ಈ ಬದಲಾವಣೆ ಕೇವಲ ಕಿಗ್ಗದಲ್ಲಿ ಮಾತ್ರ ಆಗಬೇಕಾದದ್ದಲ್ಲ. ಪ್ರತಿಯೊಂದು ದೇವಾಲಯದಲ್ಲಿ ಮತ್ತು ಯಾವುದೇ ಊರಿನ ರುದ್ರಹೋಮವಿರಲಿ, ಮಾರಿ ಹರಕೆಯಿರಲಿ, ಚೌಡಿ ಹರಕೆಯಿರಲಿ, ಅಲ್ಲೆಲ್ಲಾ ಯಾರೊಬ್ಬನನ್ನೂ ಅಲ್ಪನೆಂದು ದೂಡದೇ ನಮ್ಮ ನಡುವೆ ಸೇರಿಸಿಕೊಳ್ಳಬೇಕು. ಆಗ ಮಾತ್ರ ಹಿಂದೂ ಧರ್ಮವು ದೃಢವೂ ಅಚಲವೂ ಆಗುವುದರಲ್ಲಿ ಸಂದೇಹವಿಲ್ಲ.

—ಹೆಚ್. ಎಸ್. ಪಾಂಡುರಂಗ,
ಹುಲುಗಾರು,

# ವೇದಿಕೆ

## ಸಹಪಂಕ್ತಿ ಭೋಜನ: ಒಂದು ಅವಲೋಕನ

(3ನೇ ಪುಟದಿಂದ)

ಶೂದ್ರರು, ಆದರಲ್ಲೂ ಒಕ್ಕಲಿಗರು, ಕನ್ನೀನರ್ ಆರೋಪಿಸಿದ ಸಂಗತಿಯನ್ನು ಗಂಭೀರವಾಗಿ, ಅಷ್ಟೇ ಪ್ರಾಮಾಣಿಕ, ಮುಕ್ತ ಮನಸ್ಸಿನಿಂದ ಪರಿಗಣಿಸಬೇಕು. ತೆರೆದ ಮನಸ್ಸಿನಿಂದ ತಮಗಿಂತ ದುರ್ಬಲ ವರ್ಗದವರನ್ನು ತಮ್ಮೊಡನೆ ಸೇರಿಸಿಕೊಳ್ಳಬೇಕು. ಶೂದ್ರ ಸಮಾಜಕ್ಕೆ, ಡಾ|| ಕಾಳೇ ಗೌಡ ನಾಗವಾರ ಹೇಳುವಂತೆ "ತಮಗಿಂತ ಮೇಲಿನವರಿಗೆ ನಮಸ್ಕರಿಸಲು ಕೈ ಮತ್ತು ಕೆಳಗಿನವರಿಗೆ ಒದೆಯಲು ಕಾಲು" ಸಲ್ಲದು. ಎಲ್ಲರನ್ನೂ ಸಮಾನವಾಗಿ ಕಾಣುವ ಹೃದಯ ಅರಳಬೇಕು. ಆಗ ಮಾತ್ರ ಇಡೀ ಸಮಾಜದ ಏಳಿಗೆಗೆ ಒಂದು ಸಂಘಟಿತ ಪ್ರಯತ್ನ ಸಾಧ್ಯವಾಧೀತು.

—**ಕೆ. ಪುಟ್ಟಯ್ಯ,** ಶೃಂಗೇರಿ

## ಸಂಪ್ರದಾಯ ಯಾವುದು—ಭೋಜನವೇ? ಪೂಜೆ, ಹೋಮಗಳೇ?

**ವರ್ಷಕ್ಕೊಮ್ಮೆ** ನಡೆಯುವ ಮಹಾರುದ್ರ ಹೋಮ ಎಲ್ಲಾ ಭಕ್ತಾದಿಗಳ ಆರ್ಥಿಕ ಸಹಕಾರ ಹಾಗೂ ಶ್ರಮದಾನದಿಂದ ನಡೆಯುವ ಮಹತ್ಕಾರ್ಯ. ಇಲ್ಲಿಗೆ ಬಂದ ಭಕ್ತಾದಿಗಳಿಗೆ ಸಾಮೂಹಿಕ ಭೋಜನ. ಜಾತ್ಯಾತೀತ ರಾಷ್ಟ್ರದವರು, ಒಂದೇ ಧರ್ಮದವರು ಎಂದು ಕೊಳ್ಳುವ ನಾವೆಲ್ಲ ಸಹಪಂಕ್ತಿ ಭೋಜನ ಮಾಡಬೇಕೆಂದು ಯುವಕರು, ವಿದ್ಯಾವಂತರು, ಜಾತೀಯತೆಯನ್ನು ವಿರೋಧಿಸುವವರ ವಾದವಾದರೆ ಸಂಪ್ರದಾಯವಾದಿಗಳು ಎಂದುಕೊಳ್ಳುವವರು ಈ ವಾದವನ್ನು ಒಪ್ಪುತ್ತಿಲ್ಲ. ಆದರೆ ನನ್ನ ಅನಿಸಿಕೆ: ಸಂಪ್ರದಾಯ ಎಂದರೆ ಯಾವುದು—ಭೋಜನವೆ? ಅಥವಾ ವಿಧಿವತ್ತಾಗಿ ಲೋಕ ಕಲ್ಯಾಣಾರ್ಥವಾಗಿ ನಡೆಯಬೇಕಾದ ಪೂಜೆ ಪುನಸ್ಕಾರ, ಹೋಮ ಹವನವೆ?

ನನಗನ್ನಿಸುವ ಹಾಗೆ ವಿಧಿವತ್ತಾಗಿ ನಡೆಯ ಬೇಕಾದ ಪೂಜೆ ಪುನಸ್ಕಾರಗಳ ಬಗ್ಗೆ ಸಂಪ್ರದಾಯವಾದಿಗಳಿಗೆ, ಯುವಕರು ಬೆಂಬಲ ನೀಡಬೇಕು. ಯಾವುದೇ ಕಾರಣದಿಂದಲೂ ಧರ್ಮದ ಬಗ್ಗೆ ಅಗೌರವವಾಗುವುದು ನನಗಂತೂ ಒಪ್ಪಿಗೆಯಿಲ್ಲ.

ಇನ್ನು ಭೋಜನದ ಮಾತು ಬಂದಾಗ ಹೋಮ ಹವನಗಳಲ್ಲಿ ಭಾಗವಹಿಸುವ ಋತ್ವಿಜರು ದೇವಸ್ಥಾನದ ವರಾಂಡದಲ್ಲಿ ಕುಳಿತು ಭೋಜನ ಮಾಡುವ ವ್ಯವಸ್ಥೆಯಾಗಬೇಕು. ಉಳಿದ ಎಲ್ಲಾ ಭಕ್ತಾದಿಗಳಿಗೂ ಭೋಜನಕ್ಕೆ ಕಟ್ಟಿಸಿದ ಭೋಜನಾಲಯದಲ್ಲಿ ಸಾಮೂಹಿಕವಾಗಿ ಸಹಪಂಕ್ತಿ ಭೋಜನದ ವ್ಯವಸ್ಥೆಯಾಗಬೇಕು.

ಸ್ನಾನದ ಬಗ್ಗೆ ಹೇಳುವುದಾದರೆ—ಸಾಮಾನ್ಯವಾಗಿ **ಎಲ್ಲರೂ ರುದ್ರಹೋಮದ ದಿನ ಸ್ನಾನ ಮಾಡಿಯೇ ಬಂದಿರುತ್ತಾರೆ.** ಅಥವಾ ನಾಲ್ಕು ಬಿಂದಿಗೆ ನೀರನ್ನು ಸುರಿದು ದೇಹದ ಬಾಹ್ಯ ಕೊಳೆಯನ್ನು ತೊಳೆದುಕೊಳ್ಳುವುದಕ್ಕಿಂತ ಅಂತರಂಗ ಶುದ್ಧಿಯಿಂದ ಅನನ್ಯ **ಭಕ್ತಿಯಿಂದ** ದೇವಾಲಯಕ್ಕೆ ಬರುವವನೇ **ಅತ್ಯಂತ** ಶ್ರೇಷ್ಠನು. ಅವರವರ ಭಾವಕ್ಕೆ **ಅವರವರ** ಭಕುತಿಗೆ .... ಎಂದು ಮಹಾತ್ಮರೇ **ನುಡಿದಿಲ್ಲವೇ?** ಅಲ್ಲದೆ ಧರ್ಮಸ್ಥಳ ಹಾಗೂ **ಹೊರನಾಡು**ಗಳಲ್ಲಿ ಸಹಪಂಕ್ತಿ ಭೋಜನ ಮಾಡುತ್ತಿಲ್ಲವೆ? ಇದರಿಂದ ಕ್ಷೇತ್ರದ ಮಹತ್ವ **ಕಡಿಮೆ** ಆಗಿದೆಯೇ?

ಆದ್ದರಿಂದ ಧಾರ್ಮಿಕ ಹಾಗೂ ಸಾಮಾಜಿಕ ಈ ಎರಡೂ ಕ್ಷೇತ್ರಗಳ ಗೌರವಕ್ಕೆ ಧಕ್ಕೆಯಾಗದ ಹಾಗೆ, ಸೌಹಾರ್ದಯುತವಾದ ವಾತಾವರಣದಲ್ಲಿ ಧರ್ಮಕಾರ್ಯ ನಡೆದುಕೊಂಡು ಹೋಗಲಿ ಎಂದು ಹಾರೈಸುತ್ತೇನೆ.

—**ಎಂ ಸುರೇಂದ್ರಗೌಡ,**
ಯಡದಾಳು, ಶೃಂಗೇರಿ ತಾ||

## ಸಹಪಂಕ್ತಿ—ಸಹಜೀವನ:

# ಎಲ್ಲ ಜಾತಿ, ಎಲ್ಲ ರಂಗಗಳಲ್ಲಿ ಬರಬೇಕು

ಸಹಪಂಕ್ತಿ ಭೋಜನಕ್ಕೆ ನನ್ನ ತುಂಬು ಹೃದಯದ ಸ್ವಾಗತ. ಆದರೆ ಬರಿ ಕಿಗ್ಗದ ರುದ್ರಹೋಮದಲ್ಲಿ ಮಾತ್ರ ಆಗಬಾರದು, ಎಲ್ಲ ಕ್ಷೇತ್ರದಲ್ಲೂ ಅದು ನಡೆಯಬೇಕು – ಮದುವೆ, ಹಬ್ಬ–ಹರಿದಿನಗಳಲ್ಲೂ ಅದನ್ನು ನಡೆಸಿಕೊಂಡು ಹೋಗಬೇಕು. ಪ್ರತಿಯೊಂದು ಸಮಾಜದಲ್ಲೂ ನಡೆದರೆ ಆಗ ನಮ್ಮದು ಒಂದು ಜಾತ್ಯತೀತ ದೇಶವಾದೀತು. ಅದು ಬಿಟ್ಟು ನಾವು ಬ್ರಾಹ್ಮಣರ ಸಂಗಡ ಭೋಜನ ಮಾಡಬೇಕು, ಸಹಪಂಕ್ತಿ ಭೋಜನ ಆಗಬೇಕು ಎಂದರೆ ಏನು ಅರ್ಥ?

ಪ್ರತಿಯೊಂದು ವಿಚಾರದಲ್ಲೂ ಮೇಲ್ವರ್ಗದ ಜನ ಕೆಳವರ್ಗದ ಜನಕ್ಕೆ ಪ್ರಾತಿನಿಧ್ಯ ಕೊಟ್ಟರೆ ತನ್ನಿಂದ ತಾನೆ ಎಲ್ಲ ಸರಿ ಹೋಗುವುದರಲ್ಲಿ ಸಂಶಯವಿಲ್ಲ. ಅದು ಬಿಟ್ಟು ದೇವಸ್ಥಾನದಲ್ಲಿ ದೇವತಾ ಕಾರ್ಯಕ್ರಮಗಳಲ್ಲಿ ಈ ರೀತಿ ನಡೆಯಲಿ ಎಂದರೆ ಅದರಿಂದ ಕ್ರಮೇಣ ಕಾರ್ಯಕ್ರಮವೇ ನಿಲ್ಲಬಹುದು ಅನಿಸುತ್ತೆ ಆ ಕಾರಣದಿಂದ ನಮ್ಮ ನಮ್ಮ ಆತ್ಮದಲ್ಲಿ ಯೋಚನೆ ಮಾಡಬೇಕು ಸಹಪಂಕ್ತಿ ಭೋಜನ ನಡೆಸಬಹುದೆ–ಎಂದು. ಹಾಗಿದ್ದಲ್ಲಿ ಮೊದಲು ನಮ್ಮ ನಮ್ಮ ಮನೆಗಳಲ್ಲಿ ಮಾಡಿ ನೋಡೋಣ. ಆಮೇಲೆ ಕಿಗ್ಗದ ರುದ್ರಹೋಮದಲ್ಲಿ ಸಹಪಂಕ್ತಿಭೋಜನ ಮಾಡುವುದು ಒಳ್ಳೆಯದು ಅಲ್ಲವೆ? ಅದನ್ನ ಬಿಟ್ಟು ತಲತಲಾಂತರದಿಂದ ನಡೆಯುತ್ತಿರುವ ಹೋಮ ಯಾಗಗಳಲ್ಲಿ ಇಂಥ ವಿಚಾರವನ್ನು ಸೃಷ್ಟಿಸಿ ಕಲುಷಿತ ವಾತಾವರಣ ಸೃಷ್ಟಿ ಮಾಡುವುದು ಸರಿಯಲ್ಲವೆಂದು ನನ್ನ ಅನಿಸಿಕೆ.

—**ಹೆಚ್ ವಿ. ಶಿವಪ್ಪ,**
ಹೆಗ್ತೂರು, ಶಂಗೇರಿ ತಾ||

# ಸಿನಿಕತನದ ಪರಮಾವಧಿ

ಬಾವಿಯಲ್ಲಿದ್ದ ಪಾಚಿಯನ್ನು ಕದಡಿದ ನಂತರವೂ ಆಕ್ರಮಿಸಿಕೊಳ್ಳುವಂತೆ ಹಾರುವ ಪುರಾಣದ ಗೊಡ್ಡು ಸಂಪ್ರದಾಯ ಸಮಾಜವನ್ನು ನಿರಂತರ ಮಲಿನಗೊಳಿಸುತ್ತಿದೆ. ಇದರ ಮಥನ ಮತ್ತು ಶುದ್ಧಿಕರಣ ಪ್ರತಿಯೊಬ್ಬ ಸಾಮಾಜಿಕ ಕಳಕಳಿಯುಳ್ಳ ಜನತೆಯ ಜವಾಬ್ದಾರಿಯಾಗಿದೆ.

ಬ್ರಾಹ್ಮಣ ಸಂಪ್ರದಾಯದಂತೆ ಊಟದ ಮೊದಲು 'ಓಂ ಸಹನಾವವತು. ಸಹನೌ ಭುನಕ್ತು....' ಹೀಗೆ ಆರಂಭಿಸಿ 'ಓಂ ಶಾಂತಿಃ ಶಾಂತಿಃ ಶಾಂತಿಃ' ಎಂದು ಮುಗಿಸಿ ಭೋಜನ ಪ್ರಾರಂಭಿಸುತ್ತಾರೆ. ಈ ಮಂತ್ರ ಹೇಳುವ ಹೆಚ್ಚಿನ ಜನಕ್ಕೆ ಇದರ ಅರ್ಥ ತಿಳಿದೇ ಇದೆ. ಆದರೂ ಸಹಪಂಕ್ತಿ ಭೋಜನವನ್ನು ವಿರೋಧಿಸುವುದು ಅವರ ಸಿನಿಕತನದ ಪರಮಾವಧಿಯಲ್ಲವೆ?

ಗೊಡ್ಡು ಸಂಪ್ರದಾಯ ಕೇವಲ ಬ್ರಾಹ್ಮಣರಲ್ಲಿ ಮಾತ್ರವಲ್ಲ. ಶೂದ್ರರಲ್ಲಿಯೂ ಇದೆ ಎನ್ನುವುದು ಸತ್ಯ. ಆದರೆ ಶೂದ್ರರಲ್ಲಿ ಬ್ರಾಹ್ಮರಷ್ಟು ಕಟ್ಟು ನಿಟ್ಟಾಗಿ. ಸಮಾಜದ ಸ್ಥಗಿತತೆಗೇ ಕಾರಣವಾಗುವಷ್ಟಿಲ್ಲ. ಮಾನವೀಯ ದೃಷ್ಟಿ ತಕ್ಕ ಮಟ್ಟಿಗೆ ಜೀವಂತವಾಗಿದೆ.

ಕಿಗ್ಗಾ ದೇವಸ್ಥಾನದ ಎಲ್ಲಾ ಕಾರ್ಯಗಳಿಗೂ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಶೂದ್ರರ ಸಹಕಾರ ಅಪೇಕ್ಷಿಸುವ ಬ್ರಾಹ್ಮಣ ವರ್ಗಕ್ಕೆ, ದೇವರ ಪ್ರಸಾದವೆಂದೇ ತಿಳಿದಿರುವ ಊಟದ ವಿಷಯದಲ್ಲಿ ಏಕೆ ಈ ತಾರತಮ್ಯ?

ಸ್ನಾನ ಮಾಡದೇ ಬರುತ್ತಾರೆ ಎನ್ನುವುದು ಕನ್ನೀನರ್ ಆರೋಪ. ಆದರೆ ಸ್ನಾನ, ಮಡಿ, ನಂಬಿಕೆ ಕೇವಲ ಬ್ರಾಹ್ಮಣರಿಗೆ ಗುತ್ತಿಗೆಯಲ್ಲ. ಶೂದ್ರರೂ ಸ್ನಾನ ಮಾಡುತ್ತಾರೆ. ಮಡಿ, ನಂಬಿಕೆಯಲ್ಲಿ ಬಾಹ್ಮಣರಿಗೇನೂ ಕಡಿಮೆಯಿಲ್ಲ–ಎನ್ನುವುದು ನೆನಪಿರಲಿ.

ಜನ್ಮದಿಂದೀಚೆ ಹಲ್ಲುಜ್ಜದ, ವರ್ಷಕೊಮ್ಮೆಯೂ ಬಟ್ಟೆ ತೊಳೆಯದ, ದಿನಕ್ಕೆ ಎರಡು ತಂಬಿಗೆ ನೀರನ್ನು ಶಾಸ್ತ್ರಕ್ಕೆಂದು ಸ್ನಾನ ಮಾಡುವ ಅರ್ಚಕರು ಎಷ್ಟಿಲ್ಲ? ಆದರೂ ಇವರು ಮೇಲ್ವರ್ಗದವರು, ಇವರಿಗೆ ಅಗ್ರಸ್ಥಾನ!

ಅತ್ಯಂತ ಪುರಾತನವೂ, ದಮನಕಾರಿಯೂ ಆದ ಒಂದು ವರ್ಗದವರ ದ್ವೇಷ, ಈರ್ಷ್ಯೆ, ಕುಟಿಲತೆಯ ಪರಿಣಾಮವೇ ಈ ಜಾತಿ, ಧರ್ಮ, ದೇವರ ವ್ಯವಸ್ಥೆ. ಭಾರತದಲ್ಲಿ ಈ ಜಾತಿ, ಧರ್ಮ, ದೇವರುಗಳು ಮಾಡಿರುವ ಅಪಚಾರ ಬೇರೆಲ್ಲಿಯೂ ಮಾಡಿಲ್ಲ. ಮಾಡಿದರೂ ಭಾರತದಂತೆ ಮುಂದುವರಿಸಿಕೊಂಡು ಹೋಗಿಲ್ಲ.

ಇನ್ನಾದರೂ ಜಾತ್ಯಂಧತೆಯಿಂದ ಮೇಲು–ಕೀಳು ಎನ್ನುವ ಮನೋಭಾವ ತೊರೆದು ಎಲ್ಲಾ ಜನಾಂಗಗಳೊಂದಿಗೆ ಸಹಕರಿಸಿ. ಕಿಗ್ಗದಲ್ಲಿ ಮತ್ತು ಅಂಥ ಎಲ್ಲಾ ಕಡೆ ಸಹಪಂಕ್ತಿ ಭೋಜನಕ್ಕೆ ಅನುವು ಮಾಡಿ ಕೊಡುವುದರೊಂದಿಗೆ ಶೂದ್ರ ವರ್ಗ ಹಿಂದೂ ಧರ್ಮದಿಂದ ಸಿಡಿದು ಹೋಗುವುದಕ್ಕೆ ಆಸ್ಪದ ಕೊಡಬಾರದೆಂಬುದೇ ನನ್ನ ಅಪೇಕ್ಷೆ.

—**ಸೌಮ್ಯ ಕರಗುಂದ,**
ನ. ರಾ. ಪುರ ತಾ||

# ಪ್ರತಿಷ್ಠೆಯ ಪ್ರಶ್ನೆಯಾಗದಿರಲಿ

ಒಂದು ವೇದಿಕೆಯಲ್ಲಿ ಚರ್ಚಿತವಾಗುವ ವಿಷಯವನ್ನು ಎಲ್ಲಾ ದಿಕ್ಕುಗಳಿಂದಲೂ ನೋಡಬೇಕು; ಜೊತೆಗೆ ಆ ವಿಷಯಕ್ಕೆ ನಾವೆಷ್ಟು ಸ್ಪಂದಿಸುತ್ತೇವೆ ಎಂದು ಮನಗಾಣಬೇಕು. ಯಾವುದೇ ಒಬ್ಬ ವ್ಯಕ್ತಿ–ವ್ಯಕ್ತಿಗಳ ವೈಯಕ್ತಿಕ ಸಂಘರ್ಷ ಸಮಾಜಕ್ಕೆ ಕಂಟಕಪ್ರಾಯವಾಗುತ್ತದೆ. ಇಲ್ಲಿ ಬಲಾತ್ಕಾರದ ಸಹಪಂಕ್ತಿ ಭೋಜನ ಉಭಯವರ್ಗಕ್ಕೂ ತೃಪ್ತಿ ನೀಡಲಾರದು. "ಏನೋ ದೇವರ ಪ್ರಸಾದ, ಎಲ್ಲಿ ತಿಂದರೇನು ಈಚೆ ಕೊಡಿ ಸ್ವಾಮಿ" ಎಂದಾಗ "ನಮ್ಮಂತೆ ನೀವೂ ಮನುಷ್ಯರು, ನಮ್ಮೊಟ್ಟಿಗೆ ಬಾರೋ ಕರಿಯಣ್ಣ" ಎಂದು ಭೀಮಭಟ್ಟರು ಕರೆದರೆ ಈ ಸಮಸ್ಯೆ ಬಗೆಹರಿಯಿತೆಂದು ಭಾವಿಸ ಬಹುದು.

ಸಹಭೋಜನ ನಡೆಯದಿದ್ದರೆ ಹಿಂದೂ ಜನತೆ ಉರುಳಿ ಬಿತ್ತು ಎನ್ನುವುದರಲ್ಲಿ ನನಗೆ ವಿಶ್ವಾಸವಿಲ್ಲ. ರಥೋತ್ಸವ–ಜಾತ್ರೆ ಮೊದಲಾದ ಸಾಂಪ್ರಾದಾಯಿಕ ಕಾರ್ಯಕ್ರಮಗಳು ಹಿಂದೂ ದೇವಾಲಯಗಳಲ್ಲೇ ಹೆಚ್ಚು ನಡೆಯುವುದು. ಇತ್ತೀಚಿನ ದಿನಗಳಲ್ಲಿ ಇಲ್ಲಿ ಕಾಣುವುದೇನು? ಶೇ. 50ರಷ್ಟುಭಾಗ ಕುಡಿದು ಕುಣಿಯುವ ಮದೋನ್ಮತ್ತ ಹಿಂದುಗಳನ್ನು. ಇದು ದೈವಭಕ್ತಿಯೇ? ಮಾನವೀಯತೆಯೇ?

ಗಾಳಿ, ಬೆಳಕು, ನೀರು ಸಮನ್ವಯ ಎಲ್ಲರಿಗೂ ಬೇಕು, ಅಂತೆಯೆ ಪ್ರಾಣಿವರ್ಗಕ್ಕೂ ಬೇಕು. ಸೃಷ್ಟಿಕರ್ತನಿಗೆ ಮನುಷ್ಯ,ಪ್ರಾಣಿ ಎರಡೂ ಮಕ್ಕಳಲ್ಲವೆ? ಈ ಸಮಾನತ್ವವನ್ನು ತೊರೆದು ದೇವಸ್ಥಾನಗಳಲ್ಲೇ ಪ್ರಾಣಿಗಳನ್ನ ಬಲಿ ಕೊಡುವುದನ್ನು ಎಷ್ಟು ಕಡೆ ನೋಡುತ್ತಿಲ್ಲ? ಇದು ಅಮಾನವೀಯತೆಯೋ? ಮೂಢನಂಬಿಕೆಯೋ? ಇಂತಹ ದುಷ್ಟ ಶಕ್ತಿಗಳನ್ನು ಮತ್ತು ಪ್ರಾಣಿಬಲಿ ಕೊಡುವಂಥ ಹೇಯ ಕೃತ್ಯಗಳನ್ನು ತಡೆಯುವತ್ತ ಹೆಚ್ಚಿಗೆ ಗಮನ ಹರಿಸಿ ಭಕ್ತಿ ಭಾವಕ್ಕೆ ಈ ವ್ಯಕ್ತಿಗಳನ್ನ ತಿರುಗಿಸಿದರೆ ಸಹಪಂಕ್ತಿ ಭೋಜನದಲ್ಲಿ ಋತ್ವಿಜರಿರಲಿ ಅವರಿಗಿಂತಲೂ ಇನ್ನೊಂದು ಮೇಲ್ವರ್ಗ ಇದ್ದಿದ್ದರೆ ಅವರೊಡನೆಯೂ ಕುಳಿತು ಸಹಭೋಜನ ಮಾಡಲು ನಾವು ಅರ್ಹರಾಗುತ್ತೇವಲ್ಲವೆ? ಸಮಾಜದ ಕೊಳಕು ಎಲ್ಲರಲ್ಲಿಯೂ ಇದೆ ಇದನ್ನು ಎಲ್ಲರೂ ವಿಶ್ವಾಸ ಪೂರ್ವಕವಾಗಿ ತೊಳೆದುಕೊಳ್ಳಬೇಕು.

ಇಲ್ಲಿ ಋತ್ವಿಜರದೂ ಸಹ ಪ್ರತಿಷ್ಠೆಯ ಪ್ರಶ್ನೆಯಾಗಬಾರದು. ಋತ್ವಿಜರ ಮನೆತನದ ಅನೇಕರು ನೀಚ ಕೃತ್ಯಗಳಲ್ಲಿ ತೊಡಗಿರುವವರನ್ನ ಅನೇಕ ಕಡೆ ಕಾಣಬಹುದಾಗಿದೆ. ಆದ್ದರಿಂದ ಋತ್ವಿಜರೆ ಸಹಪಂಕ್ತಿ ಭೋಜನಕ್ಕೆ ಮುಂದಾಗಿ ಇತರರನ್ನು ಸ್ವಾಗತಿಸಿ ಸಮಸ್ಯೆಯ ಇತ್ಯರ್ಥಕ್ಕೆ ಮಾರ್ಗದರ್ಶಿಗಳಾಗಲೆಂದು ಹಾರೈಸುತ್ತೇನೆ.

—**ಎಂ. ಐ. ಶ್ರೀನಿವಾಸ ಮೂರ್ತಿ,**
ಮೂಡುಬಾಗಿಲು, ನ. ರಾ. ಪುರ ತಾ||

## ವೇದಿಕೆ

# ಬ್ರಾಹ್ಮಣರಿಗೆ ನೈತಿಕತೆಯ ಕುರುಹಾಗಿ ಗೌರವ; ಕೀಳರಿಮೆಯಿಂದಲ್ಲ

ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿರುವ ಕಿಗ್ಗಾ ದೇವಸ್ಥಾನದಲ್ಲಿ ಸಹಪಂಕ್ತಿ ಭೋಜನ ಕುರಿತ ವೇದಿಕೆಯಲ್ಲಿ ಇದುವರೆಗೂ ಹಿರಿಯರೂ, ವಿದ್ಯಾವಂತ ಯುವಕರೂ ತಮ್ಮ ತಮ್ಮ ಅಭಿಪ್ರಾಯಗಳನ್ನು ಬಿಚ್ಚು ಮನಸ್ಸಿನಿಂದ ಸಮಾಜದ ಮುಂದಿಟ್ಟಿರುವುದು ಸ್ವಾಗತಾರ್ಹ. ಆದರೆ ಶ್ರೀಮಾನ್ ಶಿವಶಂಕರ ರಾವ್‌ರವರು ತಿಳಿಸಿರುವಂತೆ ಈ ವಿಷಯದಲ್ಲಿ ಕೆಲವು ಹಿರಿಯರು ವಿರೋಧಿಸುತ್ತಾರೆ ಎಂಬುದರಲ್ಲಿ ಸತ್ಯಾಂಶವಿದೆ. ಈ ವಿಚಾರದಲ್ಲಿ ಏಕಪಕ್ಷೀಯ ತೀರ್ಮಾನವಾಗದಿರಲೆಂದು ನನ್ನ ಅಭಿಪ್ರಾಯಗಳನ್ನು ಮಂಡಿಸಿದ್ದೇನೆ. ನನ್ನ ಪ್ರೀತಿಯ ಯುವಕರು ತಕ್ಷಣ ಇದರ ವಿರುದ್ಧ ಪ್ರತಿಕ್ರಿಯೆ ತೋರಿಸುವ ಮುಂಚೆ ಪೂರ್ವಾಪರ ಯೋಚನೆಯಿಂದ ವಿಮರ್ಶಿಸಿ ಸೂಕ್ತ ತೀರ್ಮಾನ ಕೈಗೊಳ್ಳಲೆಂದು ಆಶಿಸುತ್ತೇನೆ.

ನನ್ನ ಮಗನೂ ಸೇರಿದಂತೆ (ಚಾವಲ್ಮನೆ ಸುರೇಶ್ ನಾಯ್ಕ್) ಇವರ ಸಂಖ್ಯೆಯೇ ಹೆಚ್ಚಾಗಿರುವುದರಿಂದ ಈ ವಿಷಯದಲ್ಲಿ ನಾನು ಸೋಲುವುದಂತೂ ಖಂಡಿತಾ ಎಂಬುದನ್ನು ಅರಿತೂ ಸಹ ಕರ್ತವ್ಯದೃಷ್ಟಿಯಿಂದ ಬರೆಯುತ್ತಿದ್ದೇನೆ.

ಇವರ ಬರಹದ ಉದ್ದಕ್ಕೂ ಎಲ್ಲೂ ಧಾರ್ಮಿಕತೆ ಮತ್ತು ನೈತಿಕತೆ ಬಗ್ಗೆ ವಿರೋಧ ವ್ಯಕ್ತಪಡಿಸಿರುವುದಿಲ್ಲ ಅಂದಾಗ "ಗುರುವಿಲ್ಲದ ಮಠ, ಯಜಮಾನನಿಲ್ಲದ ಮನೆ" ಇವು ಶಿಸ್ತಿಗೆ ದೂರದಲ್ಲಿರುತ್ತವೆ ಎಂಬ ನಾಣ್ಣುಡಿಯನ್ನು ಇವರು ಒಪ್ಪಿಕೊಂಡಂತಾಗಿದೆ. ಹಿಂದೂಗಳಾದ ನಾವೆಲ್ಲರೂ ದೇವರು ಮತ್ತು ಧರ್ಮ ಇವುಗಳನ್ನು ಮೈಗೂಡಿಸಿಕೊಂಡು ಇದರಿಂದುಂಟಾದ ಬೆಳಕಿನಲ್ಲಿ ಮುನ್ನಡೆಯುತ್ತಿದ್ದೇವೆ.

ನಮ್ಮ ಸಮಾಜವನ್ನು ಆರ್ಯ ಕಾಲದಲ್ಲಿಯೇ ನಾಲ್ಕು ವರ್ಗಗಳಾಗಿ ವಿಭಾಗಿಸಿ, ನಾವು ಪಾಲಿಸಿಕೊಂಡು ಬಂದಿರುವ ನೀತಿ ನಿಯಮಗಳನ್ನೊಳಗೊಂಡ ಶಾಸ್ತ್ರ, ಪುರಾಣ ಮುಂತಾದುವುಗಳಲ್ಲಿ ಆಸಕ್ತಿ ಹೊಂದಿದ ಒಂದು ವರ್ಗ ಈ ನಿಯಮಗಳನ್ನು ಅನುಸರಿಸುತ್ತಾ ಬಂದಿರಬಹುದು. ಈ ವರ್ಗದ ಮಾರ್ಗದರ್ಶನದಲ್ಲಿ ಉಳಿದ ಮೂರು ವರ್ಗಗಳು ತಮ್ಮ ತಮ್ಮ ಆಸಕ್ತಿಗನುಗುಣವಾಗಿ ಉದ್ಯೋಗಗಳಲ್ಲಿ ಪ್ರವೃತ್ತರಾಗಿ ಎಲ್ಲರೂ ಸಮಾಜದ ಸರ್ವತೋಮುಖವಾದ ಉನ್ನತಿಗೆ ಶ್ರಮಿಸುತ್ತಾ ಬಂದಿದ್ದಾರೆ. ಈ ಮಾರ್ಗದರ್ಶಕ ವರ್ಗ ಅಂದಿನಿಂದಲೂ ಮದ್ಯ, ಮಾಂಸ ಇತ್ಯಾದಿಗಳನ್ನು ವರ್ಜಿಸಿ ತಮ್ಮದೇ ಆದ ಕೆಲವು ನಿಯಮಗಳನ್ನು ಪಾಲಿಸಿಕೊಂಡು ಬರುತ್ತಾ ಇತರೆ ವರ್ಗಗಳ ಪ್ರೀತಿಯನ್ನು ಗಳಿಸಿಕೊಂಡು ಬಂದಿದ್ದಾರೆ. ಇವರೂ ಸಹ ಇತರೆ ಸಜೀವಿಗಳಂತೆ ಮಾಂಸ, ರಕ್ತದ ಮುದ್ದೆಗಳಿಂದ ನಿರ್ಮಿತವಾಗಿದ್ದರೂ ಸಹ ಕೆಲವು ಉತ್ತಮ ನಿಯಮಗಳನ್ನು ಪಾಲಿಸಿಕೊಂಡು ಇತರೆಯವರಿಗೆ ಮಾರ್ಗದರ್ಶಕರಾಗಿರುವುದರಿಂದ ನೈತಿಕತೆಯ ಕುರುಹಾಗಿ ಗೌರವವನ್ನು ತೋರಿಸುವುದು ನಮ್ಮ ಹಿರಿಮೆಯ ಸಂಕೇತವೇ ವಿನಹ ಅದು ನಮ್ಮ ಸ್ವಾಭಿಮಾನದ ದೌರ್ಬಲ್ಯವಲ್ಲ.

ಉದಾಹರಣೆಗೆ ಹಿರಿಯ ಅಧಿಕಾರಿ ಬಂದಾಗ ಕಿರಿಯ ಅಧಿಕಾರಿ ತನ್ನ ಕುರ್ಚಿಯನ್ನು ಬಿಟ್ಟುಕೊಡುವುದಿಲ್ಲವೆ? ಮದ್ಯಪಾನ ಅಥವಾ ಧೂಮಪಾನ ಮಾಡುವ ವ್ಯಕ್ತಿ ಆ ಪಾನಗಳನ್ನು ನಿಷೇಧಿಸಿದ ವ್ಯಕ್ತಿಯನ್ನು ಎದುರಾದಾಗ ಅಂಜುವುದಿಲ್ಲವೆ? ತಂದೆ ತಾಯಿಗಳಿಗೆ ಮಕ್ಕಳು ವಿಧೇಯರಲ್ಲವೆ? ಶಿಷ್ಯನು, ಗುರುವು ಎದುರಾದಾಗ ತನ್ನ ಭಕ್ತಿಯನ್ನು ತೋರಿಸುವುದಿಲ್ಲವೆ? ಈ ರೀತಿಯ ನೈತಿಕ ಭಯವು ಕೀಳರಿಮೆಯೇ? ಇದನ್ನೆಲ್ಲಾ ನೀವು ಒಪ್ಪುವುದಾದರೆ ಬ್ರಾಹ್ಮಣರಿಗಾಗಿ, ಸನ್ನಿವೇಶ ಹಾಗೂ ಸಂದರ್ಭಕ್ಕನುಸರಿಸಿ ಅವರಿಗೆ ನಮ್ಮ ಭಕ್ತಿ ಪೂರ್ವಕವಾದ ವೇದಿಕೆಯನ್ನು ಅಲಾಯದ ನಿರ್ಮಿಸುವುದರಲ್ಲಿ ತಪ್ಪಿಲ್ಲ.

ಅವರು ಇತ್ತೀಚಿಗೆ ವಯ್ಯಕ್ತಿಕ ಹಾಗು ಸರಳ ಸಮಾರಂಭಗಳಲ್ಲಿ ನಮ್ಮೊಂದಿಗೆ ಸ

(6ನೇ ಪುಟಕ್ಕೆ)

# 'ಕೀಳು' ಜಾತಿಯ ದೊಡ್ಡ ಅಧಿಕಾರಿ ಮೈಲಿಗೆಯಲ್ಲ?

ಕಿಗ್ಗ ದೇವಸ್ಥಾನದಲ್ಲಿ ನಡೆಯುವ ರಥೋತ್ಸವ, ರುದ್ರಹೋಮ ಇಂತಹ ಅನೇಕ ಕಾರ್ಯದಲ್ಲಿ ಈ ತಾಲ್ಲೂಕಿನ ಜನರಲ್ಲದೆ ಸುತ್ತ ಮುತ್ತಲಿನ ಕೆಲವು ತಾಲ್ಲೂಕುಗಳ ಜನರೂ ವಂತಿಗೆ ನೀಡುತ್ತಾರೆ.

ಎಲ್ಲರ ತನು, ಮನ, ಧನಗಳ ಸಹಾಯದಿಂದ ನಡೆಯುವ ಈ ದೇವರ ಕಾರ್ಯದಲ್ಲಿ ಸಹಪಂಕ್ತಿ ಭೋಜನ ನಡೆಯದೆ ಇರುವುದು ಸರಿಯಲ್ಲ.

ತೇರನ್ನು ಎಲ್ಲ ಜಾತಿಯವರು ಸೇರಿ ಕಟ್ಟಬಹುದು, ದೇವಸ್ಥಾನದಲ್ಲಿ ಚಪ್ಪರ ಹಾಕುವುದು ಇತ್ಯಾದಿ ಕೆಲಸಗಳಲ್ಲಿ ಹರಿಜನ, ಗಿರಿಜನ, ಬ್ರಾಹ್ಮಣ ಎಂಬ ಭೇದವಿಲ್ಲದೆ ಕೆಲಸ ಮಾಡುತ್ತಾರೆ. ಆದರೆ ಭೋಜನಕ್ಕೆ ಮಾತ್ರ ಎಲ್ಲಿಲ್ಲದ ಜಾತಿಭೇದ, ಜಾತೀಯ ಶ್ರೇಷ್ಠತೆ ಬರುತ್ತದೆಯೆ?

ರಥೋತ್ಸವ, ರುದ್ರಹೋಮದ ಭೋಜನದ ಸಮಯದಲ್ಲಿ ಒಬ್ಬ 'ಹರಿಜನ ಮಂತ್ರಿ ಅಥವಾ ಬೇರೆ ಯಾವುದೋ 'ಕೀಳು' ಜಾತಿಯ ಉನ್ನತ ಅಧಿಕಾರಿ ಬಂದರೆ ಅವನನ್ನು ಒಳಗೆ ಕರೆದು ಊಟ ಹಾಕುತ್ತಾರೆ. ಆ ಸಮಯದಲ್ಲಿ ದೇವರಿಗೆ ಮೈಲಿಗೆಯಾಗುವುದಿಲ್ಲವೇ? ಒಂದು ವೇಳೆ ನಮ್ಮ ಹರಿಜನರೊಬ್ಬರು ದಿನಕ್ಕೆ ನಾಲ್ಕು ಸ್ನಾನ ಮಾಡಿ ದೇವಸ್ಥಾನದ ಅಂಗಳದ ಮೆಟ್ಟಲು ಹತ್ತಿದರೆ ಅದು ದೇವರಿಗೆ ಮೈಲಿಗೆಯಾಗುತ್ತದೆ. ಇದು ಏಕೆ? (ಇಷ್ಟಕ್ಕೂ ಇಲ್ಲಿ ಪ್ರಶ್ನೆ ಎದ್ದಿರುವುದು ದೇವರಿಗೆ ಮೈಲಿಗೆಯಾಗುತ್ತದೆಂದೋ, ಬ್ರಾಹ್ಮಣರಿಗೆ ಮೈಲಿಗೆಯಾಗುತ್ತದೆಂದೋ!?)

ಕಸ್ವೀನರ್‌ರವರಂತೆ ಇನ್ನೂ ಹಲವರು ತಮ್ಮ ಮನೆಯಲ್ಲಿ ಹರಿಜನ ಅಥವಾ ಬೇರೆ ಯಾವುದೆ 'ಕೀಳು' ಜಾತಿಯ ಅಧಿಕಾರಿಗಳ ಜೊತೆಯಲ್ಲಿ ಕುಳಿತು ಊಟ ಮಾಡಬಹುದು ಆದರೆ ಅವರ ಮನೆಯ ಹರಿಜನ ಆಳು ಅವರ ಮನೆಯ ಜಗಲಿಗೆ ಬರಲು ಬಿಡುತ್ತಾರೆಯೇ? ಆ ಅಧಿಕಾರಿಯಿಂದ ಅನೇಕ ಲಾಭಗಳಿರುತ್ತವೆ. (ಜೊತೆಗೆ ಭಯಕೂಡ?) ಆದರೆ ಈ ಆಳಿನಿಂದ ಹಾಗಿಲ್ಲ. ಅಂದರೆ ಲಾಭವಿದ್ದರೆ ಏನು ಬೇಕಾದರೂ ಮಾಡುತ್ತಾರೆ ಅಲ್ಲವೆ?

ಬ್ರಾಹ್ಮಣರೇ ಸರ್ವ ಶ್ರೇಷ್ಠರು, ಬ್ರಾಹ್ಮಣ ದೇವರಿಗೆ ಸಮ ಎಂದು ...ದರೆ ಬ್ರಾಹ್ಮಣರಾದವರು ಎಷ್ಟು ಜನ ದಿನ ನಿತ್ಯ ಸ್ನಾನ ಮಾಡುತ್ತಾರೆ? ಎಷ್ಟು ಜನ ಸಮಾಜ ದ್ರೋಹದ ಕೆಲಸ ಮಾಡುವುದಿಲ್ಲ. ಸಮಾಜದಲ್ಲಿ ಎಲ್ಲರೂ ನಮ್ಮಂತೆ ಮನುಷ್ಯರು ಎಂದು ತಿಳಿಯುವುದು ಅಗತ್ಯ.

ದೇವಸ್ಥಾನದ ದಿನ ನಿತ್ಯದ ಪೂಜೆಗೆ 22 ಜನರ ಅಗತ್ಯವಿಲ್ಲ. 6 ಅಥವಾ 7 ಮಂದಿ ಸಾಕಾಗುತ್ತದೆ 22 ಮಂದಿ ಬ್ರಾಹ್ಮಣರಲ್ಲಿ 11 ಮಂದಿಗೆ ಸರಕಾರ ಪೂರ್ತಿಯಾಗಿ ಸಂಬಳ ಕೊಡುತ್ತದೆ. ಇನ್ನುಳಿದ 11 ಮಂದಿಗೆ ಅರ್ಧ ಸಂಬಳ ಕೊಡುತ್ತದೆ. ಪೂಜೆ ಮಾಡಿದ್ದಕ್ಕೆ ಪ್ರತಿಫಲ ಅಪೇಕ್ಷಿಸದೆ ಇರುವ ಅಂದರೆ ಸಂಬಳ ಪಡೆಯದೆ ಸ್ವಇಚ್ಛೆಯಿಂದ ಬಂದು ಪೂಜೆ ಮಾಡುವವರು ಖಂಡಿತಾ ಯಾರೂ ಇಲ್ಲ. ಪೂಜೆ ಮಾಡುವ ಎಷ್ಟು ಜನ ಬ್ರಾಹ್ಮಣರು ಎಲ್ಲರಂತೆ ವಂತಿಗೆ ನೀಡುತ್ತಾರೆ? ಕಡೆಯ ಪಕ್ಷ ತಮ್ಮ ಸಂಬಳದಲ್ಲಿ ಸ್ವಲ್ಪವಾದರೂ ದೇವರಿಗೆ ನೀಡುತ್ತಾರೆಯೇ? ಇದನ್ನು ಯೋಚಿಸಲಿ.

ದೇವರು ಎಲ್ಲರನ್ನು ಒಂದೇ ದೃಷ್ಟಿಯಿಂದ ನೋಡುತ್ತಾನೆ ಎಂದು ವೇದ ಪುರಾಣಗಳು ಹೇಳುತ್ತವೆ. ಹಾಗಾದರೆ ನಾವೇ ಈ ಜಾತಿಯನ್ನು ಸೃಷ್ಟಿಸಿದವರು ವಿನಃ ದೇವರಲ್ಲ. ಆದ್ದರಿಂದ ಸಾರ್ವಜನಿಕರ ವಂತಿಗೆಯಿಂದ ನಡೆಯುವ ಇಂತಹ ಸಾಮೂಹಿಕ ಕಾರ್ಯದಲ್ಲಿ ಸಹಪಂಕ್ತಿ ಭೋಜನಕ್ಕೆ ಎಲ್ಲರೂ ಪ್ರೋತ್ಸಾಹ ಕೊಡಬೇಕು. ಹೆಣ್ಣು-ಗಂಡು ಎಂಬ ಎರಡು ಗುಂಪು ಬಿಟ್ಟರೆ ನಾವೆಲ್ಲ ಒಂದೇ ಜಾತಿ. ಇಂತಹ ಸಾರ್ವಜನಿಕ ಸ್ಥಳದಲ್ಲಿ ಸಹಪಂಕ್ತಿ ಭೋಜನ ಮಾಡಿದರೆ ನಮ್ಮ ಹಳ್ಳಿಯಲ್ಲಿರುವ ಜಾತಿ ಭೇದವನ್ನು ಕೆಲವೇ ವರ್ಷಗಳಲ್ಲಿ ಹೋಗಲಾಡಿಸಬಹುದು. ಕನ್ವೀನರ್ ಅಪಾದಿಸಿರುವಂತೆ ಒಕ್ಕಲಿಗರಾಗಲಿ, ಇತರೆ ಯಾವ ಜಾತಿಯವರೇ ಆಗಲಿ. ಅವರು ಸಹ ಹರಿಜನ-ಗಿರಿಜನ ಮುಂತಾಗಿ ಭೇದ ಮಾಡಬಾರದು. ಇಂತಹ ಕಾರ್ಯದಲ್ಲಿ ಯುವಕರು ಬರೀ ಶೋಕಿಗಾಗಿ ಭಾಗವಹಿಸದೆ, ನಿಜವಾದ ಕಳಕಳಿಯಿಂದ ಭಾಗವಹಿಸಬೇಕು ಮತ್ತು ಸ್ವ... ನಮ್ಮ ಸಮಾಜ ಏಳಿಗೆ ಸಾಧಿಸುವುದರಲ್ಲಿ ಸಂಶಯವಿಲ್ಲ.

(ರುದ್ರಹೋಮದಲ್ಲಿ ಭಾಗವಹಿಸಿದ ಋತ್ವಿಜರು ಬೆಳಗಿನಿಂದ ಉಪವಾಸವಿರುತ್ತಾರೆ, ಎಲ್ಲರ ಜೊತೆಗಿನ ಪಂಕ್ತಿಯಲ್ಲಿ ಊಟ ಬಹಳ ತಡವಾಗಬಹುದು ಎಂದಿದ್ದರೆ, ಹಾಗೆ ಉಪವಾಸವಿದ್ದವರಿಗೆ ಮಾತ್ರ-ಕಟ್ಟುನಿಟ್ಟಾಗಿ ಅವರಿಗೆ ಮಾತ್ರ-ಬೇಗನೆ ಪ್ರತ್ಯೇಕವಾಗಿ ಒಂದು 'ಪಂಕ್ತಿ ಮಾಡಬಹುದು. ಅಷ್ಟೇ ಹೊರತು ಉಳಿದವರಿಗೆಲ್ಲ ಒಂದೇ ಪಂಕ್ತಿಯಿರಬೇಕು.)

—ಸುಧೀರ್ ಆನಂದೂರು,
ನಿಲುವಾಗಿಲು.

# ಸಾರ್ವಜನಿಕ ಸಹಪಂಕ್ತಿ ಭೋಜನಕ್ಕೆ ವಿರೋಧ ಶಿಕ್ಷಾರ್ಹ ಅಪರಾಧವೂ ಹೌದು

ಕಿಗ್ಗ ದೇವಸ್ಥಾನದಲ್ಲಿ ಸಹಪಂಕ್ತಿ ಭೋಜನದ ಬಗ್ಗೆ ತಮ್ಮ ಪತ್ರಿಕೆಯ "ವೇದಿಕೆ"ಯಲ್ಲಿ ಚರ್ಚೆಗೆ ಆಹ್ವಾನಿಸಿರುವುದು ಸಕಾಲಿಕವಾದರೂ ಈ ಗಾಂಧೀನಾಡಿನಲ್ಲಿ ಇನ್ನೂ ನಾವು ಇಂತಹ ವಿಚಾರವನ್ನು ಚರ್ಚಿಸಬೇಕೆಂದರೆ ತುಂಬಾ ಅವಮಾನವೆನಿಸುತ್ತದೆ.

ಗಾಂಧೀಜಿಯವರು ಸ್ವತಃ ಒಬ್ಬ 'ಉಚ್ಚ ಕುಲದ' ಹಿಂದೂ ಆಗಿದ್ದರೂ ಕೂಡ ಜಾತ್ಯತೀತ ರಾಷ್ಟ್ರ ನಿರ್ಮಾಣಕ್ಕಾಗಿ ಹಗಲಿರುಳೂ ದುಡಿದು ಅದಕ್ಕಾಗಿ ಪ್ರಾಣವನ್ನು ತೆತ್ತರೂ ಅವರು ತಮ್ಮ ತತ್ವದೊಂದಿಗೆ ಜೀವಂತವಾಗಿದ್ದಾರೆ. ಆದರೆ ಈ ಮಡಿವಂತರು ಅವರನ್ನು ಹೀಗೆ ಹಂತ ಹಂತವಾಗಿ ಕೊಲ್ಲುತ್ತಿದ್ದಾರೆ.

ಸಹಪಂಕ್ತಿ ಭೋಜನವನ್ನು ವಿರೋಧಿಸುವ ಸದರಿ ದೇವಸ್ಥಾನದ ಋತ್ವಿಜರೇ ಆಗಲಿ, ಅವರ ಸಮರ್ಥಕರೇ ಆಗಲಿ, ಅವರು ಓದಿದ ಪುರಾಣಗಳಲ್ಲೇ ಹೇಳಿಲ್ಲವೆ-'ಬ್ರಹ್ಮ ಜ್ಞಾನೇನ ಬ್ರಾಹ್ಮಣ' ನೆಂದು? ಅಂದರೆ ಹುಟ್ಟಿನಿಂದ ಯಾರೂ ಬ್ರಾಹ್ಮಣರೆನ್ನಿಸಿ ಕೊಳ್ಳುವುದಿಲ್ಲ. ಬ್ರಹ್ಮಜ್ಞಾನವನ್ನು ಪಡೆದವ ಬ್ರಾಹ್ಮಣನೆನಿಸಿಕೊಳ್ಳುತ್ತಾನೆ, ಅಲ್ಲವೆ? 'ಎಲ್ಲರಿಗಿಂತ ನಾವು ಮೇಲು' ಎಂದು ಅಡ್ಡ ಪಂ... ಹಿಡಿದು ಕೂರುವ ಇವರೆಲ್ಲರೂ ಬ್ರಹ್ಮಜ್ಞಾನಿಗಳೆ?

ಇನ್ನು ನಮ್ಮ ಭಾರತೀಯ ದಂಡ ಸಂಹಿತೆಯ ಸಿ. ಆರ್. ಇ. (Civil Righ[ts] Enforcement ಅಥವಾ ನಾಗರೀಕ ಹಕ್ಕುಗಳನ್ನು ಜಾರಿಗೊಳಿಸುವಿಕೆ) ನಿಯಮಗಳ ಪ್ರಕಾರ ಸಾರ್ವಜನಿಕವಾಗಿ ಸಹಪಂಕ್ತಿ ಭೋಜನಕ್ಕೆ ವಿರೋಧಿಸುವುದು ಒಂದು ಅಪರಾಧ ಕೂಡ. ಆದರೂ ಇನ್ನೂ ಜಾತಿ ವಿಷ ಬೀಜವನ್ನು ಬಿತ್ತುತ್ತಾ ಅಸ್ಪೃಶ್ಯತೆ ಪಿಡುಗಿಗೆ ನೀರೆರೆಯುತ್ತಾ ಶೂದ್ರರೆ[ನಿಸಿ] ಕೊಂಡವರನ್ನು ಕೀಳರಿಮೆಯ ಮಾನ[ಸಿಕ] ಹಿಂಸೆಗೆ ತಳ್ಳುತ್ತಿದ್ದಾರೆ ಈ 'ಸರ್ವೇ ಜನಾಃ ಸುಖಿನೋ ಭವಂತು' ಎಂದು ಬಾಯ[ಲ್ಲಿ] ಹೇಳುವ ಮಹಾಶಯರು.

ನಾವುಗಳಂತೂ ಇಬ್ಬರು ಮನುಷ್ಯ[ಕು]ಲದ ಗಂಡು ಮತ್ತು ಹೆಣ್ಣಿನ ಸಮಾ[ಗಮ]ದಿಂದ ಹುಟ್ಟಿದ್ದೇವೆ. ಹಾಗೆ ಹುಟ್ಟಿದವ[ರೆಲ್ಲ] ಒಂದೇ ಜಾತಿ ಮತ್ತು ಧರ್ಮದವರೆಂದು ತಿಳಿದು ಕೊಂಡಿದ್ದೇವೆ. ಆದರೆ ಈ '... ಪಂಕ್ತಿಯವರು' ಹೇಗೆ ಹುಟ್ಟಿದ್ದಾರೋ ನಮಗೆ ಗೊತ್ತಿಲ್ಲ. ಹೇಗಾದರೂ ಹುಟ್ಟಿ... ಡಿರಲಿ; ನಾವಂತೂ "ನಾವು ಯಾ[ರಿಗಿಂತ]ಲೂ ಮೇಲೂ ಅಲ್ಲ ಹಾಗೂ ಕೀಳೂ [ಅಲ್ಲ"] ಎನ್ನುವ ಭಾವನೆಯವರು.

—ಟಿ. ಪಿ. ಶ್ರೀನಾಥ್, ಹೊ...

## ಹಿರೇಕೊಡಿಗೆಯಲ್ಲಿ ಜನ ಸಂಪರ್ಕ ಸಭೆ

ಹಿರೇಕೊಡಿಗೆ: ಇಲ್ಲಿ ಏ. 11ರಂದು ಜಿಲ್ಲಾಧಿಕಾರಿಗಳ ಜನ ಸಂಪರ್ಕ ಸಭೆ ಮತ್ತು ಜಿಲ್ಲಾ ಕಚೇರಿ ನಡೆಯಿತು. ಊರಿನ ಸಾರ್ವಜನಿಕ ಬೇಡಿಕೆಗಳ ಬಗ್ಗೆ ಸಂಬಂಧಪಟ್ಟ ಇಲಾಖೆಗಳ ಅಧಿಕಾರಿಗಳಿಂದ ಪರಿಶೀಲನೆ, ಕೆಲವಕ್ಕೆ ಸೂಕ್ತ ಸಮಜಾಯಿಶಿಗಳು ಮತ್ತು ಸಮಾಧಾನಗಳು ದೊರೆತವು.

ಸುಮಾರು 200 ಜನ ಸುತ್ತ ಮುತ್ತಲ ಗ್ರಾಮಸ್ಥರು ಮತ್ತು 100 ಜನ ವಿವಿಧ ಇಲಾಖೆಗಳ ನೌಕರ ವರ್ಗದವರು ಸೇರಿದ್ದ ಸಭೆಯಲ್ಲಿ ಜಿಲ್ಲಾಧಿಕಾರಿಗಳು ಮಾತನಾಡಿ, ದೇಶದ ಮತ್ತು ಜನತೆಯ ಸಮಸ್ಯೆಗಳಿಗೆ ಯಾವ ರೀತಿ ಪರಿಹಾರ ನೀಡಬಹುದೆಂಬ ಬಗ್ಗೆ, ಸರ್ಕಾರದ ಯೋಜನೆಗಳ ಪ್ರಯೋಜನ ನೀಡುವಲ್ಲಿ ಅಧಿಕಾರಿಗಳು ಮತ್ತು ಪಡೆಯುವಲ್ಲಿ ಸಾರ್ವಜನಿಕರು ದುರ್ಮಾರ್ಗ ಅನುಸರಿಸುತ್ತಿರುವ ಬಗ್ಗೆ ತಿಳಿಸಿದರು.

**ತಹಸೀಲ್ದಾರ್ ಎಸ್. ಕರೀಗೌಡ ಸ್ವಾಗತಿಸಿ, ಅಲಿಗೆ ವಿವೇಕಾನಂದ ವಂದಿಸಿದರು.**

**(ವರದಿ: ಹೊಸ್ಮನೆ ರಮೇಶ್)**

### ವಾಹನಮಾಲೀಕರಿಗೆ ಸೂಚನೆ

ಕರ್ನಾಟಕ ಸರ್ಕಾರ ದಿ: 1-4-86ರಿಂದ ಸಾರಿಗೆ ಮತ್ತು ಸಾರಿಗೇತರ ವಾಹನಗಳ ತೆರಿಗೆಯನ್ನು ಹೆಚ್ಚಿಸಿದೆ. ಮೋಟಾರ್ ಸೈಕಲ್‌ಗಳ ತೆರಿಗೆಯನ್ನು ಒಂದೇ ಕಂತಿನಲ್ಲಿ ಕಟ್ಟಲು ಆಜ್ಞೆ ಹೊರಡಿಸಿದ್ದು, ವಾಹನ ಮಾಲಿಕರು ಈ ಕುರಿತು ಹೆಚ್ಚಿನ ವಿವರ ಮತ್ತು ಅವರ ವಾಹನಕ್ಕೆ ಕಟ್ಟಬೇಕಾಗಿರುವ ತೆರಿಗೆ ವಿವರಗಳನ್ನು ಚಿಕ್ಕಮಗಳೂರಿನ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಚೇರಿಯಲ್ಲಿ ಪಡೆದು ವಾಹನದ ತೆರಿಗೆಯನ್ನು ಪಾವತಿಸಿ ತೆರಿಗೆ ಕಾರ್ಡಿನಲ್ಲಿ ನಮೂದಿಸಿಕೊಳ್ಳಬೇಕೆಂದು ಪ್ರಾದೇಶಿಕ ಸಾರಿಗೆ ಅಧಿಕಾರಿ ಜಿ. ಭೀಮ್ಲಾ ನಾಯಕ್ ಹೊರಡಿಸಿದ ಪ್ರಕಟಣೆಯಲ್ಲಿ ತಿಳಿಸಿದ್ದಾರೆ.

### ನಾಲ್ಕು ಬೋರ್‌ವೆಲ್‌ಗಳಲ್ಲಿ ನೀರಿದ್ದುದು ಒಂದೇ — ಅದೂ ಈಗ ಕೆಟ್ಟಿದೆ

ಅಗಳಗಂಡಿ: ಇಲ್ಲಿಗೆ ಸಮೀಪದ ಕಚಿಗೆಯಲ್ಲಿ 4 ಬೋರ್‌ವೆಲ್‌ಗಳ ಪೈಕಿ ಒಂದರಲ್ಲಿ ಮಾತ್ರ ನೀರಿದ್ದು, ಅದೂ ಈಗ ಮುಚ್ಚಿ ಹೋಗಿದೆ. ಸಂಬಂಧಪಟ್ಟ ಇಲಾಖೆಯವರು ಕೂಡಲೇ ಸ್ವಚ್ಛ ಮಾಡಿಸಿಕೊಡಬೇಕೆಂದು ಕೆ.ಬಿ. ಸುಂದರ ಎಂಬವರು ಕೋರಿದ್ದಾರೆ.

### ಯುವತಿ ಮಂಡಳಿ ಆರಂಭ

ಕುದುರೆಗುಂಡಿ: ಇಲ್ಲಿನ ವಿನಾಯಕ ಯುವಕ ರೈತ ಸಂಘ ಮತ್ತು ಮಹಿಳಾ ಸಮಾಜಗಳ ವಾರ್ಷಿಕೋತ್ಸವದ ಸಂದರ್ಭದಲ್ಲಿ ಏ. 13ರಂದು ಕೊಪ್ಪ ಲಯನ್ಸ್ ಮಹಿಳಾ ವಿಭಾಗದ ಅಧ್ಯಕ್ಷೆ ಶ್ರೀಮತಿ ಸುನಿಲ ಅಜಿಲರು ಕೀರ್ತಿ ಯುವತಿ ಮಂಡಳಿಯನ್ನು ಉದ್ಘಾಟಿಸಿದರು. ವಸಂತ ಅಜಿಲ ಅಧ್ಯಕ್ಷತೆ ವಹಿಸಿದ್ದು, ಜಿಲ್ಲಾ ಯು|| ಸೇ|| ಅಧಿಕಾರಿ ಎ. ಆರ್. ಮಂಜುನಾಥ್ ಮತ್ತು ಅಂಗನವಾಡಿ ಮೇಲ್ವಿಚಾರಕಿ ಶ್ರೀಮತಿ ಲೂಸಿ ಡಿಸೋಜ ಮುಖ್ಯ ಅತಿಥಿಯಾಗಿದ್ದರು. ಲಯನ್ಸ್ ಅಧ್ಯಕ್ಷ ಪ್ರಭಾಕರ ಆರ್. ಕಲ್ಲೆ ಸಮಾರೋಪ ಭಾಷಣ ಮಾಡಿದರು.

### ಕಚೇರಿ ಕಟ್ಟಡ ಬದಲಾವಣೆ

ಚಿಕ್ಕಮಗಳೂರು: ಸಹಾಯಕ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ, ಜಿಲ್ಲಾ ಕಚೇರಿ ಇದನ್ನು ರಿಮ್ಯಾಂಡ್ ಹೋಂ ಆವರಣದಿಂದ 'ಅನುಗ್ರಹ ಕಾಟೇಜ್' ಎರಡನೇ ಸ್ಟೇಜ್, ಕ್ರಿಶ್ಚಿಯನ್ ಕಾಲೋನಿಗೆ ಬದಲಾಯಿಸಲಾಗಿದೆ.

### ಬೆಳವಿನಕೊಡಿಗೆ-ದಯಂಬಳ್ಳಿ ರಸ್ತೆ ರಿಪೇರಿಗೆ ಆಗ್ರಹ

ಕೊಪ್ಪ: ಈ ತಾಲ್ಲೂಕಿನ ಬೆಳವಿನಕೊಡಿಗೆ-ದಯಂಬಳ್ಳಿ ಮಧ್ಯೆ ಲೋಕೋಪಯೋಗಿ ರಸ್ತೆ ಬಹಳ ದುಸ್ಥಿತಿಯಲ್ಲಿದ್ದು, ತುರ್ತು ರಿಪೇರಿಗಾಗಿ ಸಾರ್ವಜನಿಕರು ಬಹಳ ದಿನಗಳಿಂದಲೂ ಒತ್ತಾಯಿಸಿದ್ದಾರೆ.

ಇಲ್ಲಿ ಒಂದು ಬಹಳ ನೇರವಾದ ಇಳಿಜಾರಿದ್ದು, ದಿನದಲ್ಲಿ 2 ಬಸ್‌ಗಳು ಸಹ ಓಡಾಡುವುದರಿಂದ ತೀವ್ರ ಅಪಾಯಕಾರಿಯಾಗಿದೆ

ಈ ವಿಚಾರವನ್ನು ಈಚೆಗೆ ಲೋ|| ಇಲಾಖೆ ಸ|| ಕಾ|| ಇಂಜಿನಿಯರ್ ಅವರ ಗಮನಕ್ಕೆ 'ಮುಂಜಾವು' ತಂದಾಗ, ಅತ್ತ ಗಮನ ಕೊಡುವುದಾಗಿ ಹೇಳಿದ್ದಾರೆ. ಅದೇ ಸಂದರ್ಭದಲ್ಲಿ ಅಲ್ಲಿ ಹಾಜರಿದ್ದ ಮಾಜಿ ತಾ|| ಅ. ಮಂ. ಅಧ್ಯಕ್ಷ ಬಿ. ಜಿ. ಚಿದಂಬರ್ ಅವರೂ ಈ ರಸ್ತೆಯ ಶೀಘ್ರ ದುರಸ್ತಿಗಾಗಿ ಒತ್ತಾಯಿಸಿದರು.

### ಕಳವು

ಶೃಂಗೇರಿ: ಇಲ್ಲಿನ ಹರಿಹರ ಬೀದಿಯಲ್ಲಿ ಕೆ. ಸಾಂಬಶಿವನ್ ಎಂಬವರ ಮನೆಯಲ್ಲಿ ಏ. 8ರ ಬೆಳಗಿನ ಜಾವ ಅವರು ಹೊಳೆ ಸ್ನಾನಕ್ಕೆ ಹೋಗಿದ್ದಾಗ ಕಳ್ಳರು ಮನೆಯ ಬೀಗ ಮುರಿದು ಒಂದು ಟ್ರಾನ್ಸಿಸ್ಟರ್ ಮತ್ತು ಕೈಗಡಿಯಾರ ಕದ್ದಿರುವುದಾಗಿ ತಿಳಿದು ಬಂದಿದೆ.

### ಹಲ್ಲೆ : ಬಂಧನ

ಹರಿಹರಪುರ: ಬಿಲಗದ್ದೆ ಬಳಿಯ ಕರುವಾನೆಯ ಅಣ್ಣೇನಾಯ್ಕ ಮತ್ತು ಸಿದ್ದಪ್ಪ ಗೌಡ ಎಂಬವರ ನಡುವಿನ ಜಮೀನು ನೀರಿನ ವಿವಾದದಲ್ಲಿ ಅಣ್ಣೇನಾಯ್ಕರಿಗೆ ನೆರವಾದ ಕೆಸರುಕೊಡಿಗೆಯ ಕೆ. ಎಸ್. ಮಹೇಶ್ ಎಂಬ ಗಿರಿಜನ ಯುವಕನ ಮೇಲೆ ಏ. 4ರ ರಾತ್ರಿ ಹಲ್ಲೆ ನಡೆದಿದೆ.

ಈ ಸಂಬಂಧದಲ್ಲಿ ಮಂಜಪ್ಪ ಗೌಡ, ನಾಗಪ್ಪ ಮುಂತಾದ 6 ಜನರ ಮೇಲೆ ಮಹೇಶ್ ದೂರು ಕೊಟ್ಟಿದ್ದು, ಹರಿಹರಪುರ ಪೋಲೀಸರು ಪ್ರಕರಣ ದಾಖಲು ಮಾಡಿಕೊಂಡು ಆರೋಪಿಗಳನ್ನು ಬಂಧಿಸಿ ಜಾಮೀನಿನ ಮೇಲೆ ಬಿಡುಗಡೆ ಮಾಡಿದ್ದಾರೆ.

### ಯುವಕಸಂಘದಕಾರ್ಯಕ್ರಮ: ಬಾರದೆ ಉಳಿವ ಅಧಿಕಾರಿಗಳು

ಬಿಲಗದ್ದೆ: ಇಲ್ಲಿನ ವಿವೇಕಾನಂದ ಯುವಕ ಸಂಘ ಮತ್ತು ಪವಿತ್ರಾ ಮಹಿಳಾ ಸಮಾಜದ ವಾರ್ಷಿಕೋತ್ಸವ ಏ. 13ರಂದು ಮಾಜಿ ಪಂ|| ಅಧ್ಯಕ್ಷ ಎನ್. ಸಿ. ಶಂಕರಪ್ಪ ನಾಯ್ಕರ ಅಧ್ಯಕ್ಷತೆಯಲ್ಲಿ ನಡೆಯಿತು. ಎ. ಬಿ. ವಾಸಪ್ಪ ಮುಖ್ಯ ಅತಿಥಿಯಾಗಿದ್ದರು.

ಈ ಸಮಾರಂಭಕ್ಕೆ ಬರಬೇಕಾಗಿದ್ದ ಕೊಪ್ಪದ ತಹಸೀಲ್ದಾರ್, ಬಿಡಿಓ, ಹರಿಹರಪುರ ಸಬ್ ಇನ್‌ಸ್ಪೆಕ್ಟರ್, ಶೃಂಗೇರಿ ಅರಣ್ಯಾಧಿಕಾರಿ ಇವರುಗಳೆಲ್ಲರೂ ಗೈರು ಹಾಜರಾದ ಬಗ್ಗೆ ಬಹಳ ಅಸಮಾಧಾನಗೊಂಡ ಸದಸ್ಯರು ಮತ್ತು ಗ್ರಾಮಸ್ಥರು, ನಾವು ಕರೆದಾಗ ಬರಲು ಒಪ್ಪಿ ಸಭೆಗೆ ಬಾರದಿರುವುದು ನ್ಯಾಯವೇ? ಎಂದು ಪ್ರಶ್ನಿಸಿದ್ದಾರೆ.

(ವರದಿ: ಬಿ.ಎಸ್.ಕೆ.)

### ನ. ರಾ. ಪುರ ರಾಮೋತ್ಸವ

ನ. ರಾ. ಪುರ: ಇಲ್ಲಿನ ಉಮಾಮಹೇಶ್ವರ ದೇವಸ್ಥಾನದಲ್ಲಿ ಏ. 27ರವರೆಗೆ ರಾಮೋತ್ಸವ ಕಾರ್ಯಕ್ರಮಗಳು ನಡೆಯುತ್ತವೆ. ಏ. 23ರಂದು ಸೀತಾರಾಮ ಕಲ್ಯಾಣೋತ್ಸವ, 26ರಂದು ರಾಜಬೀದಿ ಉತ್ಸವ, 27ರಂದು ಹನುಮೋತ್ಸವ.

## ವೇದಿಕೆ

## ಅತ್ಯಂತ ಪ್ರಭಾವಿ ಮುಖಂಡರಾದ ಕನ್ನೀನರ್ ಮತ್ತವರ ಹಿತೈಷಿಗಳು ಸಾವಧಾನದಿಂದ ಚಿಂತಿಸಲಿ

ನಮ್ಮ ದೇಶವು ಜಾತ್ಯತೀತ ರಾಷ್ಟ್ರವಾದರೂ ಮೇಲು ಕೀಳಿನ ಭಾವನೆ ಇನ್ನೂ ಬಹಳವಾಗಿದೆ. ಇದನ್ನು ತೊಡೆದುಹಾಕಿ ಸಾಮರಸ್ಯವನ್ನು ರೂಪಿಸಲು ಹಲವು ಸಂಘ ಸಂಸ್ಥೆಗಳು, ಧರ್ಮ ಸಂಸ್ಥೆಗಳು ಸಹಪಂಕ್ತಿ ಭೋಜನದ ಕ್ರಮ ರೂಪಿಸಿ ಬಳಕೆಗೆ ತರುತ್ತಿರುವಾಗ (ಉದಾ: ಧರ್ಮಸ್ಥಳ) ಕಿಗ್ಗದಲ್ಲಿ ಸಹಪಂಕ್ತಿ ಭೋಜನಕ್ಕೆ 'ಆಚಾರ'ಗಳು ಅಡ್ಡಿ ಬರುತ್ತವೆ, ಪುರೋಹಿತರು 'ಮೈಲಿಗೆ'ಯಾಗುತ್ತಾರೆ; "ಇಂತಹ ವ್ಯವಸ್ಥೆ ಬೇಕೆನ್ನುವುದಾದರೆ ನಾನು ಈ ದೇವಸ್ಥಾನದ ಯಾವುದೇ ಅಭಿವೃದ್ಧಿಯಲ್ಲಿ ಭಾಗಿಯಾಗುವುದಿಲ್ಲ" (ಅಂದರೆ ಮುಖಂಡತ್ವ ವಹಿಸುವುದಿಲ್ಲ) ಎಂಬ ಅರ್ಥದಲ್ಲಿ ಪ್ರಜ್ಞಾವಂತರೂ, ಮೇಧಾವಿಗಳೂ, ಊರಿನ ಪ್ರಮುಖ ಮುಖಂಡರೂ ಆದ ಕನ್ನೀನರ್‌ರವರು ಹೇಳುತ್ತಾರೆ....

ಈ ಕಾರ್ಯಕ್ಕೆ ಋತ್ವಿಜರು ಒಪ್ಪುವುದಿಲ್ಲ; ಅವರಿಲ್ಲದೆ ಯಾವ ಧರ್ಮ ಕಾರ್ಯವೂ ನಡೆಯಲಾರದು. ಹೀಗೆ ನನ್ನ ಆಡಳಿತ[illegible] ಧರ್ಮಕಾರ್ಯ ನಿಲುಗಡೆಯಾಗುವು[illegible] ನಾನು ಮುಖಂಡತ್ವ ಬಿಟ್ಟು[illegible]ದೆ— ಎನ್ನುವ ಅವರ ಮಾತು ಮೇಲು ನೋಟಕ್ಕೆ ಸಮಂಜಸವಾಗಿ ಕಾಣಬಹುದು. ಆದರೆ ಮೇಲೆ ಹೇಳಿದಂತೆ, ಸಾಮಾಜಿಕ ಏಳಿಗೆಯ ಆಗತ್ಯ ಅರ್ಥ ಮಾಡಿಕೊಂಡಿರುವವರು ಅದಕ್ಕಾಗಿ ಬೇರೆಯವರನ್ನೂ ಹುರಿದುಂಬಿಸುತ್ತಾರೆ. ಶಿವಶಂಕರರಾಯರಂಥ ಅಪಾರ ಪ್ರಭಾವಿಗಳಾದವರು ಹೀಗೆ ಪಲಾಯನ ಮಾಡುವ ಬದಲು ಇಂಥದಕ್ಕೆ ಮನಸ್ಸು ಮಾಡಿದರೆ ಅದು ಅವರಿಗೆ ಖಂಡಿತಾ ಅಸಾಧ್ಯವಲ್ಲ.

ಅವರು ಮತ್ತು ಅವರ ಎಲ್ಲ ಹಿತೈಷಿಗಳೂ ಇನ್ನೊಮ್ಮೆ ಈ ಕುರಿತು ಸಮಾಧಾನದಿಂದ ಯೋಚಿಸಲಿ. ಮುಂದಿನ ವರ್ಷದಿಂದಲೇ ಸಹಪಂಕ್ತಿ ಭೋಜನದ ಮೇಲ್ಪಂಕ್ತಿ ಹಾಕಲಿ— ಎಂದು ಅವರಲ್ಲಿ ಬಿನ್ನಹ.

**—ಬಿ. ಎಸ್. ಕೃಷ್ಣಮೂರ್ತಿ,**
ಬಿಲಗದ್ದೆ

## ನೈತಿಕತೆಗೆ ಗೌರವ; ಕೀಳರಿಮೆಯಿಂದಲ್ಲ

(5ನೇ ಪುಟದಿಂದ)

ಪಂಕ್ತಿ ಭೋಜನಕ್ಕೆ ಅಸಮಾಧಾನ ವ್ಯಕ್ತಪಡಿಸುತ್ತಿಲ್ಲ.

ಪ್ರಸ್ತುತ ಪರಿಸ್ಥಿತಿಯಲ್ಲಿ ಉಳಿದ ಸಮಾಜದ ಅವನತಿಗೆ ಕಾರಣವಾಗಿರುವ ವರದಕ್ಷಿಣೆ ಪಿಡುಗು, ಮದ್ಯಪಾನದಿಂದಾಗುವ ಹಾನಿ, ಲಂಚದ ಹಾವಳಿ, ಅರ್ಹರಿಗೆ ದಕ್ಕದ ಉದ್ಯೋಗದ ದುರುಪಯೋಗ, ಮುಂತಾದುವುಗಳ ಬಗ್ಗೆ ಕ್ರಾಂತಿಕಾರಕ ಬದಲಾವಣೆಗೆ ನನ್ನ ಪ್ರೀತಿಯ ಯುವಕರು ಸೊಂಟ ಕಟ್ಟಿದರೆ ನಮ್ಮಂತಹವರೂ ನಿಮಗೆ ಬೆಂಬಲವಾಗಿ ಸಮಾಜದ ಉನ್ನತಿಗೆ ಶ್ರಮಿಸೋಣ. ಇದರಿಂದ ಹಿಂದೂ ಸಮಾಜವೇಕೆ ಇಡೀ ಮಾನವ ಕುಲವೇ ನಿಮಗೆ ಚಿರಋಣಿಯಾಗದೇ ಇರಲಾರದು. ವೃಥಾ ಇಂತಹ ಸಣ್ಣ ವಿಷಯಗಳಿಗೆ ನಮ್ಮ ಅಮೂಲ್ಯ ಕಾಲವನ್ನು ವ್ಯಯಿಸುವುದು ಗಾಳಿಯನ್ನು ಗುದ್ದಿ ಮೈ ನೋಯಿಸಿಕೊಂಡಂತಾಗುವುದಲ್ಲದೆ ಸಮಾಜದ ಉದ್ಧಾರವಾಗಲಾರದೆಂದು ನನ್ನ ಅಭಿಪ್ರಾಯ.

ಇಂತಹ ಸೌಜನ್ಯ ಪೂರ್ವಕವಾದ ನಿಲುವು ತಳೆದಲ್ಲಿ "ಜಾತಿ ವಿಜಾತಿ ಎನಬೇಡ ದೇವನೊಲಿದಾತನೇ ಜಾತ ಸರ್ವಜ್ಞ" ಎಂಬಂತೆ ದೇವರು ನಮ್ಮನ್ನು ಒಲಿದು ನಾವೇ ಜಾತರಾಗಬಹುದೆಂದು ನನ್ನ ನಂಬಿಕೆ.

—ಸಿ. ವೆಂಕಟೇಶ ನಾಯಕ್,
ಚಾವಲ್ಮನೆ





**ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು: ವೀಣಾಪಿಗ ಅಚ್ಚುಕೂಟ, ಕೊಪ್ಪ.**